ಅಧ್ಯಾತ್ಮಗ್ರಂಥಾವಳಿ

# ಅಧ್ಯಾತ್ಮವೆಂದರೇನು?

## (ಪ್ರಶ್ನೋತ್ತರ)

ಬರೆದವರು:
**ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು**

ಕ್ರಮಾಂಕ ೪೫

ಐದನೆಯ ಸಂಸ್ಕರಣ ೫೦೦೦ ಪ್ರತಿಗಳು



ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ -573211
ದೂರವಾಣಿ 08175 - 73820

೧೯೯೭

# ವಿಷಯಾನುಕ್ರಮಣಿಕೆ

# ಮುನ್ನುಡಿ

ಕಾಲಗತಿಯಿಂದ ನಮ್ಮ ದೇಶದಲ್ಲಿ ಬಹುಜನರಿಗೆ ಈಗ ಅಧ್ಯಾತ್ಮ ಗ್ರಂಥಗಳನ್ನು ಓದುವ ಅಭಿರುಚಿಯು ಕಡಿಮೆಯಾಗಿರುವದು. ಈ ಗ್ರಂಥಗಳನ್ನು ಓದುವದರಲ್ಲಿ ಕಾಲವನ್ನು ಕಳೆಯುವದು ವ್ಯರ್ಥವೆಂದು ಕೆಲವರ ಭಾವನೆ; ಇವುಗಳಿಂದ ಜನರ ಏಳಿಗೆಗೆ ಅಡ್ಡಿಯೆಂದು ತಿಳಿದುಕೊಂಡಿರುವವರು ಕೂಡ ಕೆಲವರುಂಟು. ಈ ಅಭಿಪ್ರಾಯವನ್ನು ತೊಲಗಿಸಿ ಅಧ್ಯಾತ್ಮವಿದ್ಯೆಯು ವಿದ್ಯೆಗಳಲ್ಲೆಲ್ಲ ಮೇಲಿನ ಸ್ಥಾನಕ್ಕೆ ತಕ್ಕದ್ದೆಂದು ತೋರಿಸಿಕೊಟ್ಟ ಹೊರತು ದೊಡ್ಡ ದೊಡ್ಡ ಪ್ರಾಚೀನಗ್ರಂಥಗಳನ್ನು ಕನ್ನಡಿಸುವದು ನಿಷ್ಪ್ರಯೋಜನವೆಂದು ಹಲವರು ದೊಡ್ಡ ಮನುಷ್ಯರು ಕೊಟ್ಟ ಸೂಚನೆಯನ್ನು ಅನುಸರಿಸಿ ಈ ಬಗೆಯ ಪುಟ್ಟ ಪುಸ್ತಕಗಳನ್ನು ಹೊರಡಿಸಲು ಉಪಕ್ರಮಿಸಿರುವೆನು. ಅಧ್ಯಾತ್ಮವಿದ್ಯೆಯೇ ಭರತಖಂಡದ ಸರ್ವಸ್ವವೆಂದೂ ಇದು ಜಗತ್ತಿನ ಕಲ್ಯಾಣಕ್ಕೆ ಅತ್ಯವಶ್ಯವಾದದ್ದೆಂದೂ ಈಗಿನ ಯುವಕರ ಮನಸ್ಸಿನಲ್ಲಿ ಮೂಡುವದಕ್ಕೆ ಈ ಪುಸ್ತಕಗಳು ಒಂದಿಷ್ಟಾದರೂ ಸಹಾಯಮಾಡಿದರೆ ನನ್ನ ಉದ್ದೇಶವು ನೆರವೇರಿದಂತಾಯಿತು.

- ಲೇಖಕ.

## ಹೊಸಸಂಸ್ಕರಣಕ್ಕೆ ಪೀಠಿಕೆ

ಶ್ರೀಶ್ರೀಸ್ವಾಮಿಗಳು ತಮ್ಮ ಪೂರ್ವಾಶ್ರಮದಲ್ಲಿ ಇದನ್ನು ಬರೆದು ಪ್ರಕಟಿಸಿದ್ದರು. ಜನಪ್ರಿಯವಾಗಿದ್ದ ಇದರ ಪ್ರತಿಗಳೆಲ್ಲ ಮುಗಿದುಹೋದದ್ದರಿಂದ ಮತ್ತೆ ತಿದ್ದಿ ಅಚ್ಚುಮಾಡಿಸಲಾಗಿದೆ.

ತಾ. 27-4-1997

ಪ್ರಕಾಶಕರು

॥ ಓಮ್ ॥

# ಅಧ್ಯಾತ್ಮವೆಂದರೇನು ?

**ಪ್ರಶ್ನೆ:** ಅಧ್ಯಾತ್ಮಪ್ರಕಾಶಕಾರ್ಯಾಲಯದಿಂದ ಹೊರಡುವ ಪುಸ್ತಕಗಳಲ್ಲಿ ಬಹುಕಡೆಗಳಲ್ಲಿ 'ಅಧ್ಯಾತ್ಮ'ವೆಂಬ ಮಾತು ಕಂಡುಬರುವದಷ್ಟೆ, ಈ ಮಾತಿನ ಅರ್ಥವೇನು ?

**ಉತ್ತರ:** ಅಧ್ಯಾತ್ಮವೆಂದರೆ ಆತ್ಮನನ್ನು ಕುರಿತದ್ದು.

**ಪ್ರಶ್ನೆ:** ಆತ್ಮನೆಂದರೆ ಯಾರು ?

**ಉತ್ತರ:** ಆತ್ಮನೆಂದರೆ ಸ್ವರೂಪವು. ನಮ್ಮೆದುರಿಗೆ ಬಗೆಬಗೆಯ ರೂಪದಲ್ಲಿ ಹರಡಿಕೊಂಡಿರುವ ಪ್ರಪಂಚವಿದೆಯಷ್ಟೆ; ಇದನ್ನೆಲ್ಲ ನೋಡುತ್ತಿರುವ ವಿಚಾರಕನು 'ನಾನು' ಎಂದು ಕರೆದುಕೊಳ್ಳುತ್ತಿರುವ ವಸ್ತುವಿನ ಸ್ವರೂಪವೇ ಆತ್ಮ; ಆತ್ಮ ಎಂದರೆ ತನ್ನ ಸ್ವರೂಪವೆಂದರ್ಥ.

**ಪ್ರಶ್ನೆ:** ಹಾಗಾದರೆ 'ಅಧ್ಯಾತ್ಮಪ್ರಕಾಶ' ವೆಂದರೇನರ್ಥ? ಪ್ರಕಾಶವೆಂದರೆ ಬೆಳಕಲ್ಲವೆ? ತನ್ನ ಸ್ವರೂಪವನ್ನು ಬೆಳಗುವದಕ್ಕೆ ಬೆಳಕು ಬೇರೆ ಬೇಕೆ?

**ಉತ್ತರ:** ನಿಜ, ಬೇಕಿಲ್ಲ. ಆದರೂ ಜನರು ತಮ್ಮ ರೂಪವನ್ನರಿತು ಕೊಳ್ಳಲಾರದೆ ತಮ್ಮದಲ್ಲದ ರೂಪವನ್ನು ಹುಟ್ಟುಗಟ್ಟಿಕೊಂಡು, ತಮ್ಮಲ್ಲಿಲ್ಲದ ಏನೇನೋ ವ್ಯಥೆಯನ್ನು ಮೈಮೇಲೆ ಹಾಕಿಕೊಳ್ಳುತ್ತಿರುವರು. ಅಂಥವರ ಅಜ್ಞಾನದ ಕತ್ತಲೆಯನ್ನು ತೊಲಗಿಸುವುದಕ್ಕೆ ಒಂದು ಬೆಳಕು ಬೇಕಾಗಿರುವದು. ಇದೇ ಅಧ್ಯಾತ್ಮಜ್ಞಾನದ ಬೆಳಕು.

**ಪ್ರಶ್ನೆ:** ಜನರು ಮತ್ತೇನನ್ನಾದರೂ ಅರಿತುಕೊಂಡಿಲ್ಲವೆಂದು ಹೇಳಬಹುದು; ತಮ್ಮ ಸ್ವರೂಪವನ್ನು ತಾವೇ ಅರಿತುಕೊಂಡಿಲ್ಲವೆಂದು ಹೇಳುವದು ಸರಿಯಾದೀತೆ? ತಮ್ಮನ್ನು ತಾವು ಅರಿತುಕೊಳ್ಳದೆ ಇರುವದಕ್ಕೆ ಕಾರಣವಾದರೂ ಏನು ?

**ಉತ್ತರ:** ಕಾರಣವಿನ್ನೇನು? ವಿಚಾರಮಾಡದೆ ಇರುವದೇ. ಜನರು ಮಿಕ್ಕದ್ದೆಲ್ಲವನ್ನೂ ವಿಚಾರಮಾಡುವರು; ಆದರೆ ತಾವು ಯಾರೆಂಬುದನ್ನು ಮಾತ್ರ ವಿಚಾರಿಸುವದಕ್ಕೆ ಹೋಗುವದಿಲ್ಲ. 'ಮನೆಯ ಯಜಮಾನನಿಗೇಕೆ ಅಭಿಘಾರದ ಗೊಡವೆ?' ಎಂಬಂತೆ ಆಗಿರುತ್ತದೆ, ಅವರ ಪಾಡು! ತಮ್ಮನ್ನು ತಾವು ಅರಿತುಕೊಳ್ಳದಂತೆ ಮಾಡುವದಕ್ಕೆ ಈ ಅಜ್ಞಾನವಲ್ಲದೆ ಮತ್ತೆ ಯಾವದೂ ಕಾರಣವಿರುವದಿಲ್ಲ.

**ಪ್ರಶ್ನೆ:** ಜನರು ತಮ್ಮನ್ನು ತಾವು ಅರಿತುಕೊಳ್ಳದಿರುವರೆಂಬುದು ನನಗಿನ್ನೂ ಒಪ್ಪಾಗಲಿಲ್ಲ. 'ನೀನು ಯಾರು?' ಎಂದು ಕೇಳಿದರೆ ಚಿಕ್ಕ ಹುಡುಗರು ಕೂಡ, "ನಾನು ರಾಮು, ಇಂಥವರ ಮಗನು, ಇಂಥ ಪಾಠ ಶಾಲೆಯಲ್ಲಿ ಓದುತ್ತಿದ್ದೇನೆ"- ಎಂದು ಮುಂತಾಗಿ ಹೇಳುವರೇ ಹೊರತು 'ನನಗೆ ಗೊತ್ತಿಲ್ಲ'ವೆಂದು ಎಂದಿಗೂ ಹೇಳುವದಿಲ್ಲ. ಆದ್ದರಿಂದ ಯಾರಿಗೂ ತಮ್ಮ ವಿಷಯದಲ್ಲಿ ಸಂಶಯವಿರುವದೇ ಇಲ್ಲ. ನಮ್ಮನ್ನು ನಾವು ತಿಳಿದುಕೊಳ್ಳುವದಕ್ಕೆ ಒಂದು ಬೆಳಕು ಬೇಕೆಂದು ಯಾರಾದರೂ ಹೇಳಿದರೆ ಹಾಗೆ ಹೇಳಿದವರ ಮೆದುಳಿನಲ್ಲಿ ಏನೋ ಹೆಚ್ಚು ಕಡಿಮೆಯಾಗಿರಬೇಕೆಂದು ಜನರು ಭಾವಿಸುವರೇ ಹೊರತು, ಆ ಮಾತು ನಿಜವಾಗಿದ್ದೀತೆಂದು ಅರ್ಧಕ್ಷಣವೂ ಯೋಚಿಸಲಾರರು. ಅಲ್ಲವೆ?

**ಉತ್ತರ:** ದಿಟ, ನೀವು ಹೇಳಿದಂತೆಯೇ ಬಹುಜನರ ಭಾವನೆ ಇರುವದು. ಇದನ್ನೇ ನಾವು ಅಜ್ಞಾನವೆನ್ನುವದು. ತಮಗೆ ತಮ್ಮ ನಿಜವು ತಿಳಿಯದಿದ್ದರೂ ತಮ್ಮನ್ನು ತಾವು ತಪ್ಪಾಗಿಯೇ ತಿಳಿದುಕೊಂಡಿದ್ದರೂ, ತಮಗೆ ನಿಜವು ತಿಳಿದೇ ಇದೆಯೆಂದು ಭಾವಿಸುವದು ಅಜ್ಞಾನವಲ್ಲದೆ ಮತ್ತೇನು?

**ಪ್ರಶ್ನೆ:** ಸರಿಹೋಯಿತು! ಜನರೆಲ್ಲ ಹೆಡ್ಡರೆಂದು ಜರೆದು ಯಾವ ಕೆಲಸಕ್ಕೂ ಬಾರದ ಈ ವಿಷಯವನ್ನು ಅವರಿಗೆ ತಿಳಿಸುವದಕ್ಕೆಂದು ಹೊರಟರೆ ಅಂಥವರನ್ನು ಕಂಡು ಲೋಕವು ನಗದೆ ಇದ್ದೀತೆ?

**ಉತ್ತರ:** ಇದು ಜನರನ್ನು ಜರೆಯುವದಲ್ಲ, ತಿಳಿಯದ ವಿಷಯವನ್ನು ತಿಳಿಸುವದು. ಜನರಿಗೆ ಹೊಸ ವಿಷಯವನ್ನು ತಿಳಿಸುವವರು 'ಇದು ಜನರಿಗೆ ತಿಳಿಯದು' ಎನ್ನದೆ ಮತ್ತೇನೆನ್ನುವದಕ್ಕಾದೀತು? ಇದಕ್ಕೊಂದು ಉದಾಹರಣೆ: 'ಅಲ್ಯುಮಿನಿಯಂ ಎಂಬ ಲೋಹವು ಜೇಡಿಮಣ್ಣಿನಲ್ಲಿರುವದು' ಎಂದು ಜನರಿಗೆ ಮೊದಲು ತಿಳಿದಿರಲಿಲ್ಲ; ಆಗ 'ಈ ವಿಷಯವು ಅನೇಕರಿಗೆ ತಿಳಿಯದು' ಎಂದು ಭೌತಿಕಶಾಸ್ತ್ರಜ್ಞರು ಆ ಲೋಹವನ್ನು ಮಣ್ಣಿನಿಂದ ಶೋಧಿಸಿ ತೆಗೆದು ತೋರಿಸಿದರು. ಭೌತಿಕಶಾಸ್ತ್ರಜ್ಞರು ಇದರಿಂದ ನಗೆಗೀಡಾದರೆ? ಇಲ್ಲ. ಈಗ ಜನರು ಅಲ್ಯೂಮಿನಿಯಂ ಲೋಹವನ್ನು ಬಗೆಬಗೆಯಲ್ಲಿ ಬಳಸಿಕೊಳ್ಳುತ್ತಿದ್ದಾರೆ; ಭೌತಿಕಶಾಸ್ತ್ರಜ್ಞರು ಮಾಡಿದ ಉಪಕಾರವನ್ನು ಸ್ಮರಿಸುತ್ತಲೂ ಇದಾರೆ. 'ನಮ್ಮ ಹೆಡ್ಡತನವನ್ನು ಹೊರಕ್ಕೆ ಹಾಕಿದರಲ್ಲ!' ಎಂದು ಯಾರೂ ಅವರಮೇಲೆ ಸಿಟ್ಟುಮಾಡಿಕೊಳ್ಳುವದಿಲ್ಲ. ಆತ್ಮವಿಚಾರದಲ್ಲಿಯೂ ಹೀಗೆಯೇ. ತಿಳಿಯದ್ದನ್ನು ತಿಳಿಸಿಕೊಟ್ಟರೆ ಜನರು ಅಂಥವರ ಉಪಕಾರಸ್ಮರಣೆಯನ್ನು ಮಾಡಬೇಕೇ ಹೊರತು ಅವರೊಡನೆ ಸಿಟ್ಟುಮಾಡಿಕೊಳ್ಳುವದಕ್ಕೇನೂ ಕಾರಣವಿರುವದಿಲ್ಲ.

**ಪ್ರಶ್ನೆ:** ಎಲ್ಲಿಂದೆಲ್ಲಿಗೆ! ಭೌತಿಕಶಾಸ್ತ್ರದ ಶೋಧನೆಗಳಿಂದ ಕಂಡು ಹಿಡಿದ ವಿಷಯಗಳು ನಮ್ಮ ವ್ಯವಹಾರಕ್ಕೆ ಉಪಯೋಗಕರವಾಗಿರುತ್ತವೆ; ಆದ್ದರಿಂದ ಜನರು ಆ ಶಾಸ್ತ್ರದ ವಿದ್ವಾಂಸರನ್ನು ಗೌರವಿಸುವದು ಸರಿಯೇ ಆಗಿದೆ. ಆದರೆ ನಿಷ್ಪ್ರಯೋಜನವಾದ ಅಧ್ಯಾತ್ಮವಿಚಾರವನ್ನು ಹರಡುವದರಿಂದ ಜನರಿಗೆ ಯಾವ ಉಪಕಾರವನ್ನೂ ಕಾಣೆ. ಆದ್ದರಿಂದಲೇ ಭೌತಿಕಶಾಸ್ತ್ರದ ತಿಳಿವಳಿಕೆಯನ್ನು ಜನರಲ್ಲಿ ಹಬ್ಬಿಸುವದಕ್ಕಾಗಿ ಸರ್ಕಾರದವರು ವಿದ್ಯಾಶಾಲೆಗಳಲ್ಲಿಯೂ ಆ ಶಾಸ್ತ್ರವನ್ನು ಬೋಧಿಸುವದಕ್ಕೆ ಏರ್ಪಡಿಸಿರುತ್ತಾರೆ; ಹಾಗೆ ಅಧ್ಯಾತ್ಮವಿಚಾರವನ್ನು ಪಾಠಗಳ ಪಟ್ಟಿಯಲ್ಲಿ ಸೇರಿಸುವದಕ್ಕಾದೀತೆ?

**ಉತ್ತರ:** ಅಧ್ಯಾತ್ಮವಿಚಾರರು ನಿಷ್ಪ್ರಯೋಜನವೆಂದು ಹೇಗೆ ತಿಳಿದು ಕೊಂಡಿರಿ? ಅದನ್ನು ವಿಚಾರಮಾಡಿದಮೇಲಲ್ಲವೆ, ಪ್ರಯೋಜನವುಂಟೆಂದೋ

ಇಲ್ಲವೆಂದೋ ಗೊತ್ತುಪಡಿಸಬೇಕು? ಭೌತಿಕಶಾಸ್ತ್ರದ ಪ್ರಯೋಜನವನ್ನು ಮನಗಂಡಮೇಲೆ ಸರ್ಕಾರದವರು ವಿದ್ಯಾಶಾಲೆಗಳಲ್ಲಿ ಅದನ್ನು ಬೋಧಿಸುವದಕ್ಕೆ ಏರ್ಪಾಡುಮಾಡಿರುವಂತೆ ಅಧ್ಯಾತ್ಮಶಾಸ್ತ್ರದ ಪ್ರಯೋಜನವನ್ನು ಮನಗಂಡರೆ ಅದನ್ನೂ ಬೋಧಿಸುವದಕ್ಕೆ ಏರ್ಪಾಡುಮಾಡಿಯೇ ಮಾಡುವರು. ಇದರಲ್ಲಿ ಸಂಶಯವಾದರೂ ಏನು? ಈಗಲೂ ಕೆಲವು ಕಡೆ ಅಧ್ಯಾತ್ಮಶಾಸ್ತ್ರವನ್ನು ಕಲಿಸಬೇಕೆಂಬ ಏರ್ಪಾಡು ಇದ್ದೂ ಇದೆ.

**ಪ್ರಶ್ನೆ:** ಇರಬಹುದು; ಆದರೂ ಆಧ್ಯಾತ್ಮಿಕವಿಚಾರದಿಂದ ಪ್ರಯೋಜನ ವೇನೆಂಬುದೀಗ ಪ್ರಶ್ನೆ.

**ಉತ್ತರ:** ಪ್ರಯೋಜನವೊ? ಆತ್ಮಸ್ವರೂಪವನ್ನರಿಯದೆ ಜನರು ಎಷ್ಟೋ ಅನರ್ಥಗಳಿಗೆ ಗುರಿಯಾಗಿರುವರು; ಅಂಥ ಅನರ್ಥಗಳನ್ನು ಹೋಗಲಾಡಿಸಿಕೊಂಡು ಆನಂದದಿಂದ ವ್ಯವಹಾರಮಾಡಬಹುದೆಂಬುದೇ ಈ ವಿಚಾರದ ಪ್ರಯೋಜನವು.

**ಪ್ರಶ್ನೆ:** ಇದನ್ನು ತಿಳಿದುಕೊಳ್ಳದೆ ಇರುವದರಿಂದ ಇಂಥಿಂಥ ಅನರ್ಥಗಳಾಗಿರುವವೆಂದು ಬೆಟ್ಟಿಟ್ಟು ತೋರಿಸಬೇಕಲ್ಲದೆ ಎಷ್ಟೋ ಅನರ್ಥಗಳಾಗಿವೆಯೆಂದರೆ ಯಾರು ಒಪ್ಪುತ್ತಾರೆ? ಈಗಿನ ಕಾಲದಲ್ಲಿ ಜನರು ಎಷ್ಟೋ ಆರ್ಥಿಕ, ಸಾಮಾಜಿಕ, ರಾಜಕೀಯಸಮಸ್ಯೆಗಳಲ್ಲಿ ಸಿಕ್ಕಿರುವರು; ಅವುಗಳನ್ನು ಬಿಡಿಸುವದಕ್ಕೆ ದೊಡ್ಡದೊಡ್ಡ ಮಹನೀಯರು ಬೇರೆಬೇರೆ ದಾರಿಗಳನ್ನು ತೋರಿಸುತ್ತಿರುವರು. ನಿಮ್ಮ ಈ ಆತ್ಮವಿಚಾರದಿಂದ ಈ ಸಮಸ್ಯೆಗಳಲ್ಲಿ ಒಂದನ್ನಾದರೂ ಬಿಡಿಸಲಿಕ್ಕೆ ಎಳ್ಳಷ್ಟಾದರೂ ಸಹಾಯವಾದೀತೆ? ಆಗದಿದ್ದರೆ ಜನರಿಗೆ ಇದರ ಗೊಡವೆಯಾದರೂ ಏತಕ್ಕೆ?

**ಉತ್ತರ:** ಕೇಳಿ. ಮನುಷ್ಯನು ಲೋಕದಲ್ಲಿ ಯಾವ ತೊಡಕೂ ಇಲ್ಲದೆ ಆನಂದದಿಂದಿರಬೇಕಾದರೆ ಹೇಗೆ ವ್ಯವಹಾರಮಾಡಬೇಕೆಂಬುದೇ ಒಂದು ದೊಡ್ಡ ಸಮಸ್ಯೆ. ನೀವು ಹೇಳಿದ ಸಮಸ್ಯೆಗಳೆಲ್ಲ ಈ ದೊಡ್ಡ ಸಮಸ್ಯೆಯ ತುಂಡುಗಳು. ಈ ದೊಡ್ಡ ಸಮಸ್ಯೆಯನ್ನು ಪೂರ್ಣಮಾಡಿದರೆ, ಮಿಕ್ಕ ಸಮಸ್ಯೆಗಳಿಗೆ ಉತ್ತರವು ತಾನಾಗಿಯೇ ಸಿಕ್ಕುವದು. ಅಧ್ಯಾತ್ಮವಿಚಾರಕ್ಕೆ ಈ

ಒಟ್ಟು ಸಮಸ್ಯೆಯನ್ನು ಪೂರ್ತಿಗೊಳಿಸುವದೇ ಉದ್ದೇಶವು. ಆದ್ದರಿಂದ ಈ ವಿಚಾರವು ವ್ಯವಹಾರಕ್ಕೆ ಉಪಯೋಗವಾದೀತೋ ಇಲ್ಲವೋ ನೀವೇ ಊಹಿಸಿಕೊಳ್ಳಬಹುದು.

**ಪ್ರಶ್ನೆ:** ಉದ್ದೇಶವೇನೋ ಶ್ಲಾಘ್ಯವೇ. ಆದರೆ ಅದು ನೆರವೇರುವದು ಮಾತ್ರ ಸಂಶಯಗ್ರಸ್ತವಾಗಿದೆ. ಆತ್ಮವಿಚಾರವೆಂದರೆ ತನ್ನ ಸ್ವರೂಪದ ವಿಚಾರವೆಂದು ನೀವು ಹೇಳಿರುವಿರಿ. ಆದರೆ ಪ್ರಪಂಚದಲ್ಲಿ ವ್ಯವಹಾರವನ್ನು ಹೇಗೆ ಮಾಡಬೇಕೆಂಬ ತೊಡಕನ್ನು ಬಿಚ್ಚಬೇಕೆನ್ನುವವನು ಪ್ರಪಂಚದ ಕಡೆಗೆ ಕಣ್ಣುಹಾಕಬೇಕೆ, ತನ್ನನ್ನು ತಾನು ನೋಡಿಕೊಂಡು ಕೂರಬೇಕೆ? ತನ್ನ ಪಾಡನ್ನು ತಾನು ನೋಡಿಕೊಂಡು ಕುಳಿತುಕೊಳ್ಳುವದಕ್ಕೆ ಒಂದು ವಿಚಾರವೂ ಬೇಕೆ? ಈ ಸ್ವಾರ್ಥವಿಚಾರಕ್ಕೂ 'ಅಧ್ಯಾತ್ಮ' ಎಂಬ ಒಂದು ಸಂಸ್ಕೃತದ ಘನತೆಯ ಹೆಸರು ಬೇರೆ ಏತಕ್ಕೆ?

**ಉತ್ತರ:** ಹಾಗಲ್ಲ. ತನ್ನ ನಿಜವಾದ ಸ್ವರೂಪವನ್ನು ಅರಿತರೆ ಮನುಷ್ಯನು ಎಂದಿಗೂ ಸ್ವಾರ್ಥಪರನಾಗಲಾರನು. 'ಸ್ವಾರ್ಥ' ಎಂದರೆ ತನಗೇ ಆಗಬೇಕೆಂಬ ಪ್ರಯೋಜನವು. ಮನುಷ್ಯನು ತನ್ನ ಸ್ವರೂಪವನ್ನು ಅರಿಯದೆ ತಪ್ಪು ತಿಳಿವಳಿಕೆಯಿಂದ ತಾನೆಂದು ಮಾಡಿಕೊಂಡಿರುವ ಸ್ವರೂಪವನ್ನೇ ಇಲ್ಲಿ 'ಸ್ವ' ಎಂದು ಕರೆಯುವದು; ಹೆರರ ಸುಖದುಃಖಗಳನ್ನು ಲೆಕ್ಕಿಸದೆ ತಪ್ಪುತಿಳಿವಳಿಕೆಯಿಂದ ಹುಟ್ಟುಗಟ್ಟಿಕೊಂಡಿರುವ ಈ 'ಸ್ವ' ಎಂಬ ತನ್ನ ರೂಪದ ಪ್ರಯೋಜನಕ್ಕೆಂದು ಮಾಡುವದೆಲ್ಲ ಸ್ವಾರ್ಥದ ಕೆಲಸವೆನಿಸುವದು. ತಿಳಿದವರೆಲ್ಲರೂ ಈ ಸ್ವಾರ್ಥದ ಕೆಲಸವನ್ನು ನಿಂದಿಸುತ್ತಾರೆ; ಏಕೆಂದರೆ ಇದರಿಂದ ಯಾರಿಗೂ ನಿಜವಾದ ಪ್ರಯೋಜನವಾಗುವದಿಲ್ಲ; ಎಷ್ಟೋ ಅನರ್ಥಗಳಾಗುತ್ತವೆ. ಆದರೆ ತನ್ನ ನಿಜವಾದ ಸ್ವರೂಪವನ್ನು ತಿಳಿದುಕೊಂಡರೆ ಇಂಥ ಯಾವ ಅನರ್ಥಗಳೂ ಆಗುವದಿಲ್ಲ; ಅದನ್ನು ತಿಳಿದುಕೊಂಡವರಿಂದ ಎಲ್ಲರಿಗೂ ಹಿತವೇ ಆಗುತ್ತದೆ. ಆದ್ದರಿಂದಲೇ ನಾವು ಅಧ್ಯಾತ್ಮವಿಚಾರವನ್ನು ಮಾಡುವದು ಎಲ್ಲರಿಗೂ ಅಗತ್ಯವೆಂದು ಹೇಳುವದು.

**ಪ್ರಶ್ನೆ:** ನನ್ನ ಸಂಶಯವು ಇನ್ನೂ ಬಗೆಹರಿಯಲಿಲ್ಲ. ತನ್ನ ನಿಜವಾದ ಸ್ವರೂಪವನ್ನು ತಿಳಿದುಕೊಂಡಮಾತ್ರದಿಂದ ಎಲ್ಲರಿಗೂ ಹಿತವು ಹೇಗೆ ಆದೀತು?

ವ್ಯವಹಾರದಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ತಿಳಿದುಕೊಳ್ಳಬೇಕಾದರೆ ಪ್ರಪಂಚದಲ್ಲಿ ತನಗೆ ಕಾಣುತ್ತಿರುವ ಮನುಷ್ಯರನ್ನೂ ಮಿಕ್ಕ ಪ್ರಾಣಿಗಳನ್ನೂ ಅವುಗಳಿಗೆ ಒಂದೊಂದಕ್ಕೆ ಇರುವ ಸಂಬಂಧವನ್ನೂ ತನಗೂ ತನ್ನ ನೆರೆಯವರಾದ ಮನುಷ್ಯರಿಗೂ ಮತ್ತು ಮಿಕ್ಕ ಪ್ರಾಣಿಗಳಿಗೂ ಇರುವ ಸಂಬಂಧವನ್ನೂ ತಿಳಿದುಕೊಳ್ಳುವದು ಅತ್ಯಗತ್ಯವು. ಹಾಗಿಲ್ಲದೆ ತನ್ನ ಸ್ವರೂಪದ ನಿಜವೇನೆಂದು ತಿಳಿದುಕೊಳ್ಳುವದಕ್ಕೋಸ್ಕರ ತಲೆಯನ್ನು ಎಷ್ಟು ಕೆರೆದುಕೊಂಡರೆ ತಾನೆ ಈ ವ್ಯವಹಾರಕ್ಕೆ ಉಪಯೋಗವಾದೀತು? ನನ್ನ ಸಂಶಯದಲ್ಲಿ ಇದು ಒಂದು ಭಾಗ. ಇನ್ನು ಎರಡನೆಯ ಭಾಗವನ್ನು ಕೇಳಿ. ತಾನು ಎಂದರೂ ಒಂದೇ, ತನ್ನ ನಿಜವಾದ ಸ್ವರೂಪ ಎಂದರೂ ಒಂದೇ, ಆತ್ಮನೆಂದರೂ ಒಂದೇ- ಎಂದಲ್ಲವೆ, ತಾವು ಹೇಳುತ್ತಿರುವದು? ಹಾಗಾದರೆ 'ತನ್ನ ಸ್ವರೂಪದ ವಿಚಾರ'ವೆಂದು ಸ್ಪಷ್ಟವಾಗಿಯೇ ಏತಕ್ಕೆ ಹೇಳಿಬಿಡಬಾರದು? ಬಹುಜನರಿಗೆ ಅರ್ಥವಾಗದ 'ಅಧ್ಯಾತ್ಮ' ವಿಚಾರವೆಂಬ ಸಂಸ್ಕೃತಶಬ್ದವನ್ನು ಉಪಯೋಗಿಸುವದರಿಂದೇನು ಪ್ರಯೋಜನ? ಇದು ಸಂಶಯದ ಎರಡನೆಯ ಭಾಗ. ಈ ಸಂಶಯಕ್ಕೆ ತಾವು ಏನು ಉತ್ತರಹೇಳಿದಂತಾಯಿತು?

**ಉತ್ತರ:** ನಿಮ್ಮ ಸಂಶಯದ ಎರಡನೆಯ ಭಾಗದಿಂದಲೇ ಮೊದಲು ಹೊರಡೋಣ. 'ತಾನು' ಎಂಬ ಕನ್ನಡಶಬ್ದಕ್ಕಿಂತ 'ಆತ್ಮ' ಎಂಬ ಸಂಸ್ಕೃತ ಶಬ್ದದಲ್ಲಿ ಹೆಚ್ಚಿನ ಅಭಿಪ್ರಾಯವು ಅಡಕವಾಗಿರುವದು. ಈ ವಿಚಾರವನ್ನು ಅತಿಪುರಾತನಕಾಲದಲ್ಲಿ ನಡೆಯಿಸಿ ಇದರ ಪ್ರಯೋಜನವನ್ನು ಮನಗಂಡಿದ್ದ ನಮ್ಮ ದೇಶದ ಮಹರ್ಷಿಗಳು ಸಂಸ್ಕೃತಭಾಷೆಯನ್ನೇ ಆಡುತ್ತಿದ್ದರು; ಅವರು ನಮ್ಮಗಳ ನಿಜವಾದ ಸ್ವರೂಪದ ವಿಷಯಕ್ಕೆ ಪಟ್ಟಿರುವ ಅಭಿಪ್ರಾಯಗಳನ್ನೆಲ್ಲ 'ಆತ್ಮ' ಎಂಬ ಶಬ್ದದಲ್ಲಿ ಅಡಗಿಸಿರುತ್ತಾರೆ. ಹೇಗೆಂದರೆ ಆತ್ಮ ಎಂಬ ಸಂಸ್ಕೃತಶಬ್ದದ ವ್ಯುತ್ಪತ್ತಿಯನ್ನು 'ಆಪ್' (ಹೊಂದು, ಹಬ್ಬಿರು), 'ಆದಾ' (ತೆಗೆದುಕೊ), 'ಅದ್' (ತಿನ್ನು), 'ಅತ್' (ಕಡಿವಡೆಯದೆ ಇರು)- ಎಂಬ ನಾಲ್ಕು ಧಾತುಗಳಿಂದ ಮಾಡಬಹುದಾಗಿರುತ್ತದೆ. ಆದಕಾರಣ 'ಆತ್ಮ' ಎಂಬ ಮಾತಿನಲ್ಲಿ 'ಎಲ್ಲೆಲ್ಲಿಯೂ ವ್ಯಾಪಿಸಿರುವವನು', 'ಎಲ್ಲವನ್ನೂ ತನ್ನಲ್ಲಿ

ತೆಗೆದಿಟ್ಟುಕೊಳ್ಳುವವನು', 'ಎಲ್ಲವನ್ನೂ ಅನುಭವಿಸುವವನು', 'ಎಲ್ಲಿಯೂ ಕಡಿವಡೆಯದೆ ಸಂತತವಾಗಿ ಒಂದೇ ಸಮನಾದ ರೂಪದಿಂದ ಇರುತ್ತಿರುವವನು' - ಎಂಬ ನಾಲ್ಕು ಅರ್ಥಗಳು ಸೇರಿಕೊಂಡಿವೆ. ಈ ಬಗೆಯ ನಮ್ಮ ನಿಜವಾದ ಸ್ವರೂಪವನ್ನರಿಯದೆ ಪ್ರಪಂಚವನ್ನೆಲ್ಲ ಬಿಟ್ಟು ತಾನೇ ಒಂದು ಕಡೆ ಇರುವೆನೆಂದು ಮನುಷ್ಯನು ತಿಳಿದುಕೊಳ್ಳುವದರಿಂದಲೇ ಅವನಲ್ಲಿ ಸ್ವಾರ್ಥಬುದ್ಧಿಯು ಮೊಳಕೆಯಾಗುವದು. ಆದ್ದರಿಂದ ಎಲ್ಲೆಲ್ಲಿಯೂ ವ್ಯಾಪಿಸಿರುವ ತನ್ನ ನಿಜವಾದ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡರೆ ತನಗೂ ಮಿಕ್ಕವರಿಗೂ ಇರುವ ನಿಕಟಸಂಬಂಧವನ್ನೂ ಅರಿತುಕೊಂಡಂತೆಯೇ ಆಗುವದಲ್ಲವೆ? ಇದನ್ನು ಲಕ್ಷ್ಯದಲ್ಲಿಟ್ಟರೆ ನಿಮ್ಮ ಸಂಶಯದ ಮೊದಲನೆಯ ಭಾಗಕ್ಕೂ ಪರಿಹಾರವನ್ನು ಹೇಳಿದಂತೆಯೇ ಆಗುವದು.

**ಪ್ರಶ್ನೆ:** ನೀವು ಹೇಳಿದಂತೆಯೇ ನಮ್ಮ ಆತ್ಮನ ನಿಜವಾದ ಸ್ವರೂಪ ವಿರುವದೆಂಬುದಕ್ಕೆ ಪ್ರಮಾಣವೇನು? ಈ ಆತ್ಮವಿಚಾರದಲ್ಲಿ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳುತ್ತಿರುವರಲ್ಲ! ಶಾಸ್ತ್ರವಾಕ್ಯಗಳನ್ನು ತಮತಮಗೆ ತಿಳಿದ ರೀತಿಯಲ್ಲಿ ಅರ್ಥಮಾಡುತ್ತಾ ಕಚ್ಚಾಡುವವರನ್ನೆಲ್ಲ ಒಂದು ಅಭಿಪ್ರಾಯಕ್ಕೆ ತಂದಮೇಲಲ್ಲವೆ, ನಿಮ್ಮ ಅಧ್ಯಾತ್ಮವಿಚಾರದ ಪ್ರಯೋಜನವನ್ನು ನಾವು ಕಾಣಬೇಕು?

**ಉತ್ತರ:** ಹಾಗೇನೂ ಇಲ್ಲ. ಈಗ ನಾವು ಹೇಳುತ್ತಿರುವದು ಶಾಸ್ತ್ರಗಳ ಬಡಿದಾಟವಲ್ಲ; ನಾವುನಾವೇ ನಮ್ಮನಮ್ಮ ಅನುಭವವನ್ನು ನೋಡಿಕೊಂಡು ನಿರ್ಣಯಮಾಡಿಕೊಳ್ಳುವ ವಿಷಯ. ಇದಕ್ಕಾಗಿ ಶಾಸ್ತ್ರಗಳನ್ನು ಬಲ್ಲವರನ್ನೆಲ್ಲ ಒಕ್ಕಡೆ ಕಲೆಯಹಾಕಬೇಕಾದದ್ದೇನೂ ಇಲ್ಲ. ಈಗ ನಾವು ಹೇಳಿರುವದನ್ನು ನೀವೇ ಚೆನ್ನಾಗಿ ಪರೀಕ್ಷೆಮಾಡಿ ನೋಡಿ ನಿಮಗೆ ಒಪ್ಪಾದರೆ ಸರಿಯೆನ್ನುವದು, ಇಲ್ಲದಿದ್ದರೆ ಕೈಬಿಡುವದು-ಇಷ್ಟೇ ಹೊರತು ಇದರಲ್ಲಿ ಮತ್ತೊಬ್ಬರ ಅಭಿಪ್ರಾಯಕ್ಕೆ ಕಟ್ಟುಬೀಳಬೇಕಾದ ಸಂದರ್ಭವೇನೂ ಇರುವದಿಲ್ಲ.

**ಪ್ರಶ್ನೆ:** ಆಗಲಿ. ನೀವು ಈಗ ಹೇಳುವ ಆತ್ಮಸ್ವರೂಪವಾದರೂ ಏನು?

ಉತ್ತರ: ಕೇಳಿ. ನಮ್ಮೆಲ್ಲರ ನಿಜಸ್ವರೂಪವಾಗಿರುವ ಈ ಆತ್ಮನು ಒಬ್ಬನೇ. ಅವನಿಗೆ ಜನ್ಮನಾಶಗಳೆಂಬುದಿಲ್ಲ; ಅವನು ಜ್ಞಾನಾನಂದ ಸ್ವರೂಪನಾಗಿರುವನು. ಇದನ್ನರಿಯದೆ ನಾವು ಬೇರೆಬೇರೆ ಆತ್ಮಸ್ವರೂಪಗಳನ್ನು ಕಲ್ಪನೆಮಾಡಿಕೊಂಡು, 'ನಾನು ಬೇರೆ, ಅವರು ಬೇರೆ' ಎಂದು ಕಚ್ಚಾಡುತ್ತಿರುವೆವು; ಇದರಿಂದ ಬಗೆಬಗೆಯಾದ ಅನರ್ಥಗಳನ್ನು ಅನುಭವಿಸುತ್ತಿರುವೆವು.

ಪ್ರಶ್ನೆ: ಇದು ಯಾರೋ ಕೆಲವರು ವೇದಾಂತಿಗಳು ಮಾತ್ರ ಹೇಳಿಕೊಳ್ಳುತ್ತಿರುವ ಮಾತಲ್ಲವೆ? ಆ ಒಂದು ಪಂಗಡದವರ ಮತವನ್ನು ಅನುಸರಿಸಿ ಮಿಕ್ಕವರೆಲ್ಲರೂ ತಮ್ಮತಮ್ಮ ಮತವನ್ನು ಬಿಡವದಕ್ಕಾದೀತೆ?

ಉತ್ತರ: ಯಾರೋ ಕೆಲವರು ವೇದಾಂತಿಗಳೆಂಬುವರು ಹೇಳುತ್ತಾರಾದ್ದರಿಂದ ನಾವು ಒಪ್ಪಬೇಕೆಂಬುದಾಗಲಿ ಒಪ್ಪಬಾರದೆಂಬುದಾಗಲಿ ಸರಿಯಲ್ಲ. ಸಂತೆಗೆ ಕೆಲವು ದಪಸಗಳೂ ದಿನಸುಗಳೂ ವ್ಯಾಪಾರಕ್ಕೆ ಬಂದಿದ್ದರೆ ಅವುಗಳನ್ನು ಬೆಳೆದವರು ಯಾರು, ಮಾಡಿದವರು ಯಾರು?- ಎಂದು ಮೊದಲು ವಿಚಾರಮಾಡಿ ಆಮೇಲೆ ಆ ಪದಾರ್ಥಗಳ ಬೆಲೆಯನ್ನು ಕಟ್ಟುತ್ತೇವೆಯೆ? ಇಲ್ಲ. ಇದರಂತೆ 'ಈ ತತ್ತ್ವವನ್ನು ಹೇಳಿದವರು ಯಾರು?'- ಎಂಬುದನ್ನೇನೂ ಇಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದುದಿಲ್ಲ. 'ಇದು ನ್ಯಾಯ ಸಮ್ಮತವಾಗಿದೆಯೆ?', 'ಇದು ಅನುಭವಕ್ಕೆ ಹೊಂದಿಕೆಯಾಗಿದೆಯೆ?', 'ಇದರ ತಿಳಿವಳಿಕೆಯಿಂದ ಜನರಿಗೆ ಪ್ರಯೋಜನವುಂಟೆ?'- ಎಂಬುದನ್ನೇ ನೋಡಬೇಕು. ಈ ತತ್ತ್ವಗಳನ್ನು ನಂಬುವದರಿಂದ ಯಾರೊಬ್ಬರೂ ತಮ್ಮ ಮತವನ್ನು ಬಿಟ್ಟುಬಿಡಬೇಕಾಗುವದೆಂಬುದೇನೂ ಇಲ್ಲ. ಏಕೆಂದರೆ ಇಲ್ಲಿ ಮತಾಚರಣೆಗೆ ವಿರುದ್ಧವಾದದ್ದನ್ನೇನೂ ಹೇಳುವದಿಲ್ಲ. ಚೆನ್ನಾಗಿ ನೋಡಿದರೆ ಮತಗಳಿಗೆ ಈ ವಿಚಾರದಿಂದ ದಾರ್ಢ್ಯವೇ ಬರುವದು.

ಪ್ರಶ್ನೆ: ದಾರ್ಢ್ಯವೆಲ್ಲಿಂದ ಬಂತು? ನಮ್ಮ ದೇಶದಲ್ಲಿ ಒಬ್ಬೊಬ್ಬನು ಒಂದೊಂದು ಮತವನ್ನು ಅನುಸರಿಸುತ್ತಿದ್ದಾನೆ. ಅವರಿಗೆಲ್ಲ ಈ ವಿಚಾರದಿಂದ ಪ್ರಯೋಜನವಾಗುವದೆ?

**ಉತ್ತರ:** ನಮ್ಮ ದೇಶದಲ್ಲಿಯೇ ಆಗಲಿ, ಮಿಕ್ಕ ದೇಶಗಳಲ್ಲಿಯೇ ಆಗಲಿ, ಎಲ್ಲಾ ಮತಗಳೂ ಶ್ರದ್ಧಾಭಕ್ತಿಗಳ ಆಧಾರದ ಮೇಲೆಯೇ ನಿಂತಿರುತ್ತವೆ. ಎಲ್ಲರೂ ತಾವು ತಾವು ನಂಬಿಕೊಂಡಿರುವ ದೇವರನ್ನು ಭಕ್ತಿಯಿಂದ ಉಪಾಸನೆ ಮಾಡುತ್ತಾರೆ, ಸ್ತೋತ್ರಮಾಡುತ್ತಾರೆ, ಪೂಜಿಸುತ್ತಾರೆ, ಈ ಸಾಧನೆಗಳು ಒಂದೊಂದು ಮತದವರಲ್ಲಿ ಒಂದೊಂದು ಬಗೆಯಾಗಿರುತ್ತವೆ. ಒಂದೊಂದು ಮತದಲ್ಲಿಯೂ ಮಹಾತ್ಮರು ಇರುತ್ತಾರೆ; ಅವರಿಗೆ ವಿಶೇಷವಾಗಿ ಆಯಾ ತತ್ತ್ವಗಳ ನೇರಾದ ಅನುಭವವು ಆಗಿರುವದೆಂದು ಆಯಾ ಮತಸ್ಥರು ಹೇಳಿಕೊಳ್ಳುತ್ತಾರೆ. ಆಯಾ ಮತಗ್ರಂಥಗಳ ಮತ್ತು ಮತೋಪದೇಶಕರ ಬೋಧನೆಯಂತೆ ನಡೆದುಕೊಳ್ಳುವದೇ ಧರ್ಮವೆಂದೂ ಅದಕ್ಕೆ ವಿರುದ್ಧವಾಗಿ ನಡೆಯುವದು ಅಧರ್ಮವೆಂದೂ ಧರ್ಮದಿಂದ ಸದ್ಗತಿಯೂ ಅಧರ್ಮದಿಂದ ದುರ್ಗತಿಯೂ ಆಗುವದೆಂದೂ ಅವರೆಲ್ಲರೂ ಹೇಳುತ್ತಾರೆ. ಒಬ್ಬೊಬ್ಬರೂ ತಮ್ಮ ತಮ್ಮ ಮತದಲ್ಲಿರುವ ಅಭಿಮಾನದಿಂದ ತಮ್ಮ ಆಚರಣೆಗಳನ್ನೂ ಉಪದೇಶಗಳನ್ನೂ ಒಪ್ಪದೆ ಇರುವವರನ್ನೆಲ್ಲ ನಿಂದಿಸುತ್ತಾರೆ. ಈ ಕಾರಣಗಳಿಂದ ಬೇರೆ ಬೇರೆಯ ಮತಗಳವರಿಗೆ ಜಗಳಗಳೂ ಹೊಡೆದಾಟಗಳೂ ಆಗಾಗ್ಗೆ ಆಗುತ್ತಾ ಹಿಂಸೆ, ಕೊಲೆ-ಮುಂತಾದವುಗಳೂ ತಲೆದೋರುವವು. ಆದರೂ ಯಾವ ಮತದವರೂ ಜನರ ಮತ್ತು ಪ್ರಾಣಿಗಳ ಹಿಂಸೆಯನ್ನಾಗಲಿ ಕೊಲೆಯನ್ನಾಗಲಿ ಧರ್ಮವೆಂದು ಒಪ್ಪುವದಿಲ್ಲ. ಹೀಗಿರುವದರಿಂದ ಮತಗಳಿಗೆಲ್ಲ ಆಧಾರವಾಗಿರುವ ಪ್ರಧಾನವಾದ ಸಾಮಾನ್ಯ ತತ್ತ್ವಗಳು ಯಾವವು, ಪ್ರಧಾನವಲ್ಲದ ವಿಷಯಗಳು ಯಾವವು? - ಎಂಬುದನ್ನು ವಿಂಗಡಿಸಿಕೊಳ್ಳುವದು ಅವಶ್ಯವಾಗಿರುವದು. ಅಧ್ಯಾತ್ಮವಿಚಾರದಿಂದ ಎಲ್ಲಾ ಮತದವರೂ ತಮ್ಮ ಮತದಲ್ಲಿ ಸಾರವಾದ ಅಂಶವನ್ನು ಗೊತ್ತುಪಡಿಸಿಕೊಳ್ಳಬಹುದು. ಅದಕ್ಕೆ ಆಧಾರವಾದ ಯುಕ್ತಿಯನ್ನೂ ಅನುಭವವನ್ನೂ ಕಂಡುಕೊಳ್ಳಬಹುದು. ಅಧ್ಯಾತ್ಮವಿಚಾರವು ಮಾನವರಿಗೆಲ್ಲ ಸಹಜವಾಗಿರುವ ಅನುಭವದ ಆಧಾರದಮೇಲೆ ಮಾಡತಕ್ಕದ್ದಾದ್ದರಿಂದ ಅದನ್ನು ಯಾವದಾದರೂ ಒಂದು ಮತದವರು ತಮ್ಮದೇ ಎಂದು ಇತರರಿಗೆ ದೊರಕದ ಹಾಗೆ ಬೇರ್ಪಡಿಸಿ

ಮಡಿಯಲ್ಲಿಟ್ಟುಕೊಳ್ಳುವದಕ್ಕೆ ಬರುವದಿಲ್ಲ. ಎಲ್ಲರಿಗೂ ಆತ್ಮನುಂಟು. ಆದ್ದರಿಂದ ಅಧ್ಯಾತ್ಮವಿಚಾರದಲ್ಲಿ ಎಲ್ಲರಿಗೂ ಸಮವಾಗಿ ಪಾಲುಂಟು.

**ಪ್ರಶ್ನೆ:** ಬೇರೆಬೇರೆ ಮತಗಳ ವಿಚಾರವು ಹಾಗಿರಲಿ. ಸಾಮಾನ್ಯವಾಗಿ ನಮಗೆಲ್ಲರಿಗೂ ತಿಳಿದಿರುವದಕ್ಕೇ ತಾವು ವಿರುದ್ಧವಾಗಿ ಹೇಳುತ್ತಿರುವಿರಲ್ಲ! ನಾವುಗಳು ಬೇರೆಬೇರೆಯಾಗಿದ್ದರಲ್ಲವೆ, ಒಬ್ಬರಿಗೊಬ್ಬರು ಹೇಗೆ ನಡೆದುಕೊಳ್ಳಬೇಕೆಂಬ ವಿಚಾರವು ಹುಟ್ಟುವದು? ಒಬ್ಬನೇ ಇದ್ದುಕೊಂಡಿದ್ದರೆ, ವ್ಯವಹಾರವೆಲ್ಲಿಂದ ಬಂತು? ಉಪಕಾರ, ಅಪಕಾರ- ಎಂಬಿವು ಇಬ್ಬರಿದ್ದರೆ ಮಾತ್ರ ಸಾಧ್ಯ. ಎಲ್ಲರಲ್ಲಿಯೂ ಒಬ್ಬನೇ ಆತ್ಮನಿದ್ದರೆ ಯಾರಿಂದ ಯಾರಿಗೆ ಉಪಕಾರ, ಯಾರಿಂದ ಯಾರಿಗೆ ಅಪಕಾರ?

**ಉತ್ತರ:** ನೀವು ಹೇಳುವದು ನಿಜವೇ. ಆತ್ಮನೊಬ್ಬನೇ ಇರುವೆಡೆಯಲ್ಲಿ ಅವನಿಗೆ ತನ್ನಿಂದ ತನಗೆ ಆಗಬೇಕಾದ ಉಪಕಾರವೂ ಇಲ್ಲ; ಅಪಕಾರವೂ ಇಲ್ಲ. ಆದರೆ ಬೇರೆಬೇರೆಯಾಗಿ ಕಾಣುತ್ತಿರುವ ಪ್ರಾಣಿಗಳಲ್ಲಿಯೂ ಮನುಷ್ಯರಲ್ಲಿಯೂ ಒಬ್ಬನೇ ಆತ್ಮನಿರುವನೆಂಬುದಕ್ಕೆ ಇದರಿಂದ ಅಡ್ಡಿಯೇನು? ನಾವುಗಳೆಲ್ಲರೂ ಒಬ್ಬರಿಗೊಬ್ಬರು ಅತ್ಯಂತ ಭಿನ್ನರಾಗಿದ್ದರೆ ಒಬ್ಬರನ್ನೊಬ್ಬರು ಪ್ರೀತಿಸ ಬೇಕೆನ್ನುವದಕ್ಕಾಗಲಿ ಯಾವನಾದರೂ ತನ್ನ ಸ್ವಾರ್ಥವನ್ನು ಬಿಟ್ಟು ಮತ್ತೊಬ್ಬರಿಗೆ ಉಪಕಾರವನ್ನು ಮಾಡಬೇಕೆಂಬುದಕ್ಕಾಗಲಿ ಯಾವ ಕಾರಣವನ್ನೂ ಹೇಳುವದಕ್ಕಾಗುವದಿಲ್ಲ. ಆದರೆ ನಿಜವಾಗಿಯೂ ನಮ್ಮ ಆತ್ಮನೇ ಎಲ್ಲರ ಆತ್ಮನೂ ಆಗಿರುವನೆಂಬುವರ ಮತದಲ್ಲಿ ಹಾಗಲ್ಲ. ಈ ಪ್ರಪಂಚದಲ್ಲಿ ಮತ್ತೊಬ್ಬರ ಸಂಬಂಧವೇ ಇಲ್ಲದೆ ನಾನೊಬ್ಬನೇ ಇರುವದಿಲ್ಲ; ನಾನು ಎಲ್ಲಿಯೇ ಇರಲಿ, ನನ್ನ ಇರವು ಮತ್ತೊಬ್ಬರ ಇರವಿಗಿಂತ ಬೇರೆಯಲ್ಲ, ನನ್ನ ಹಿತವು ಮತ್ತೊಬ್ಬರ ಹಿತಕ್ಕಿಂತ ಬೇರೆಯಲ್ಲ-ಎಂಬ ಉದಾರವಾದ ತತ್ತ್ವಕ್ಕೆ ಈ ಸಿದ್ಧಾಂತವು ಬಲವನ್ನು ಕೊಡುವದು.

**ಪ್ರಶ್ನೆ:** ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುವಾಗ ತನ್ನ ಅನುಕೂಲವನ್ನು ಕೈಬಿಡಬೇಕೆಂಬುದನ್ನು ಈ ಸಿದ್ಧಾಂತದಲ್ಲಿಯೂ ತೋರಿಸಿಕೊಡುವದಾಗುವದಿಲ್ಲ.

ಏಕೆಂದರೆ ತನ್ನ ಆತ್ಮನೂ ಮತ್ತೊಬ್ಬರ ಆತ್ಮನೂ ಒಬ್ಬನೇ ಆದಮೇಲೆ ತನಗೇ ಎಲ್ಲವನ್ನೂ ಇಟ್ಟುಕೊಂಡು ಮತ್ತೊಬ್ಬನಿಗೇನೂ ಉಪಕಾರಮಾಡದಿದ್ದರೆತಾನೆ ಏನು? ಈ ಅಭೇದಸಿದ್ಧಾಂತದ ಮರೆಯಲ್ಲಿ ಜನರು ಎಂಥ ಹೀನಕೃತ್ಯವನ್ನಾದರೂ ಮಾಡಬಹುದೆಂದು ನನಗೆ ತೋರುತ್ತದೆ. ಏಕೆಂದರೆ "ನನ್ನ ಸುಖವಾದರೆ ಎಲ್ಲರ ಆತ್ಮನಿಗೂ ಸುಖವಾಗಿಯೇತೀರುವದು'- ಎಂದು ದುಷ್ಟರಾದವರು ಬಗೆಯಬಹುದಾಗಿದೆ; ಅಲ್ಲವೆ?

**ಉತ್ತರ:** ನಾನು ಹೇಳಿದ ಆತ್ಮಸ್ವರೂಪವನ್ನು ನೀವು ಚೆನ್ನಾಗಿ ತಿಳಿದುಕೊಳ್ಳದ್ದರಿಂದ ಈ ಪ್ರಶ್ನೆಯು ಎದ್ದುಕೊಂಡಿತು. ಪರರ ಸುಖವನ್ನು ತಪ್ಪಿಸಿಯಾದರೂ ತನ್ನ ಸುಖವನ್ನು ಸಂಪಾದಿಸಿಕೊಳ್ಳಬೇಕೆಂಬುವನು ತಿಳಿದಿರುವ 'ನಾನು' ಎಂಬ ಪದಾರ್ಥವು ನಿಜವಾದ ಆತ್ಮನಲ್ಲ; ಇದಕ್ಕೆ ಅಹಂಕಾರವೆಂದು ಹೆಸರು. ಈ ಅಹಂಕಾರವನ್ನು ತಾವೆಂದು ತಿಳಿದಿರುವರೇ ವಿಷಯಾಸಕ್ತಿಯಲ್ಲಿ ಮುಳುಗಿರುವವರು; ಅವರು ತಮಗೆ ಬೇಕಾದ ವಿಷಯಸುಖವು ದೊರಕದಿದ್ದರೆ ರಾಗದ್ವೇಷಗಳಿಗೆ ಈಡಾಗುವರು, ಇದರಿಂದ ಅವರಿಗೆ ದುಃಖವೂ ಒದಗುವದು. ಆದರೆ ಎಲ್ಲರಲ್ಲಿಯೂ ಒಬ್ಬ ಆತ್ಮನೇ ಇರುವನೆಂದು ತಿಳಿದಿರುವವರಿಗೆ ಇಂಥ ಶೋಕಮೋಹಗಳು ಬರುವದಕ್ಕೆ ದಾರಿಯೇ ಇರುವದಿಲ್ಲ. ಏಕೆಂದರೆ ಅವರ ದೃಷ್ಟಿಯಿಂದ ತನ್ನ ಆತ್ಮನೇ ಎಲ್ಲರ ಆತ್ಮನಾಗಿರುವದರಿಂದ ಯಾರ ಸುಖವನ್ನಾದರೂ ತಪ್ಪಿಸಿ ತನ್ನ ಸುಖವನ್ನು ಸಂಪಾದಿಸಿಕೊಳ್ಳುವೆನೆಂಬ ಮಾತಿಗೆ ಅರ್ಥವೇ ಇರುವದಿಲ್ಲ.

**ಪ್ರಶ್ನೆ:** ನಮ್ಮೆಲ್ಲರಲ್ಲಿಯೂ ಒಬ್ಬನೇ ಆತ್ಮನಿರುವನೆಂಬುದನ್ನು ಒಪ್ಪದಿದ್ದರೆ ನೀತಿಯನ್ನು ಬೋಧಿಸುವದಕ್ಕೆ ಆಗುವದಿಲ್ಲವೆ? ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಒಬ್ಬ ಪರಮೇಶ್ವರನಿರುವನೆಂದು ನಂಬದವರು ನೀತಿಗೆ ವಿರುದ್ಧರಾಗಿರುವರೆ? ವ್ಯವಹಾರದಲ್ಲಿ ನಾನು, ನೀನು- ಎಂಬ ಭೇದವಿದ್ದರೂ ನಿಜವಾದ ಇವಕ್ಕೆಲ್ಲ ಆಧಾರವಾಗಿರುವ ಆತ್ಮವಸ್ತುವು ಯಾವದೂ ಇಲ್ಲವೆಂದೇ ಹೇಳುತ್ತಿರುವ ನಾಸ್ತಿಕರು ಕೂಡ ನೀತಿಯನ್ನು ಬಿಟ್ಟಿಲ್ಲವಲ್ಲ! ಉದಾಹರಣೆಗೆ

ಬೌದ್ಧರನ್ನು ನೋಡಿ. ಅವರು ಜೀವಾತ್ಮನನ್ನಾಗಲಿ, ಪರಮಾತ್ಮನನ್ನಾಗಲಿ ಒಪ್ಪುವದಿಲ್ಲ. ಆದರೆ ಆ ಮತದಲ್ಲಿ ನೀತಿಗೇನಾದರೂ ಕಡಿಮೆಯಾಗಿದೆಯೆ? ಆದರಿಂದ ಸಮಾಜದ ಸುಖಕ್ಕೂ ಶಾಂತಿಗೂ ಆಧಾರವಾಗಿ ಬರಿಯ ನೀತಿಯನ್ನೇ ಏತಕ್ಕೆ ಉಪದೇಶಿಸಬಾರದು? ಈ ಆತ್ಮವಿಚಾರವು ಬೇರೆ ಏಕೆ?

**ಉತ್ತರ:** ನಿಜ. ನೀತಿಯಿಂದ ನಡೆದುಕೊಳ್ಳುವದಕ್ಕೆ ಆತ್ಮವಿಚಾರವೇನೂ ಬೇಕಿಲ್ಲ. ಆದರೆ ಅಡಿಗಟ್ಟಿಲ್ಲದೆ ಉಪದೇಶಿಸಿದ ನೀತಿಯು ಶಾಸ್ತ್ರೀಯ ವೆನಿಸುವದಿಲ್ಲ, ಶಾಶ್ವತವಾದ ಪರಿಣಾಮವನ್ನೂ ಕೊಡುವದಿಲ್ಲ. ಆದ್ದರಿಂದಲೇ ಯಾವ ಉಪದೇಶವೂ ಇಲ್ಲದೆಯೇ ಕೆಲವರು-ಅಥವಾ ಕೆಲವರೇಕೆ? ಬಹುಮಂದಿ- ಅನೀತಿವಂತರಾಗಿಯೂ ಇರುತ್ತಾರೆ. ಎಲ್ಲಾ ಮತದವರೂ ನೀತಿಯನ್ನೇ ಹೊಗಳಿದ್ದಾರೆ, ಆದರೆ ನೀತಿಯ ಆಧಾರವೇನೆಂಬುದನ್ನು ಮಾತ್ರ ಎಲ್ಲರೂ ಸ್ಪಷ್ಟವಾಗಿ ತಿಳಿಸಿಕೊಡುವದಿಲ್ಲ. ಏಕೆಂದರೆ ಯಾವದು ನೀತಿ, ಯಾವದು ಅನೀತಿ?- ಎಂಬುದನ್ನು ಗುರುತಿಸುವದಕ್ಕೆ ಮಿಕ್ಕ ಸಿದ್ಧಾಂತಗಳಲ್ಲಿ ಹೆಗ್ಗುರುತೇನೂ ಇರುವದಿಲ್ಲ.

**ಪ್ರಶ್ನೆ:** ಯಾವದು ಧರ್ಮ, ಯಾವದು ಅಧರ್ಮ?- ಎಂದರೆ ತಾವು ಹೇಳುವದೇನು?

**ಉತ್ತರ:** ಯಾವದನ್ನು ಆಚರಿಸುವದರಿಂದ ಮನುಷ್ಯನು ನಾನು ಮತ್ತೊಬ್ಬರೆಂಬ ಭೇದಭಾವವನ್ನು ತೊರೆದು ಸರ್ವರಲ್ಲಿಯೂ ಇರುವ ಆತ್ಮನೇ ತಾನೆಂಬ ಉತ್ತಮತತ್ತ್ವವನ್ನು ಕಂಡುಕೊಳ್ಳುವದಕ್ಕೆ ಸಹಾಯವಾಗುವದೋ ಅದು ಧರ್ಮವು; ಹಾಗಿಲ್ಲದೆ ಅಂಥ ಭೇದಭಾವನೆಗಳನ್ನೇ ಒತ್ತಿ ಕೀಳುಭಾವನೆಯನ್ನು ಬಲಪಡಿಸುವದು ಯಾವದೋ ಅದು ಅಧರ್ಮವು. ಇದನ್ನರಿತವರಿಗೆ ಧರ್ಮಸ್ವರೂಪವಿಚಾರದಲ್ಲಿ ಮಿಕ್ಕವರ ನಂಬಿಕೆಗೂ ಅಧ್ಯಾತ್ಮಸಿದ್ಧಾಂತಕ್ಕೂ ಇರುವ ತಾರತಮ್ಯವು ಸ್ಪಷ್ಟವಾಗುತ್ತದೆ. ಪರಮೇಶ್ವರನು ಒಪ್ಪುವದು ಧರ್ಮವು, ಪರಲೋಕಸುಖವನ್ನು ಕೊಡುವದು ಧರ್ಮವು, ದೊಡ್ಡವರು ಉಪದೇಶಿಸಿರುವದು ಧರ್ಮವು- ಎಂದು ಮುಂತಾಗಿ ಬೇರೆ ಬೇರೆ ಮತಗಳಲ್ಲಿ ಹೇಳಿರುವ

ಧರ್ಮಲಕ್ಷಣಗಳಿಗಿಂತ ಅಧ್ಯಾತ್ಮವಿಚಾರದಲ್ಲಿ ನಾವು ಕಂಡುಕೊಳ್ಳುವ ಈ ಧರ್ಮಲಕ್ಷಣವು ಎಷ್ಟು ಮೇಲುತರದ್ದೆಂಬುದು ಈಗ ನಿಮಗೇ ಗೊತ್ತಾಗಿರಬಹುದು.

**ಪ್ರಶ್ನೆ:** ಮೇಲೇನು, ಕೀಳೇನು? ಅವರೆಲ್ಲರೂ ಒಂದು ಕಾರಣವನ್ನು ಕೊಟ್ಟಿರುವಂತೆಯೇ ನೀವೂ ಒಂದು ಕಾರಣವನ್ನು ಕೊಟ್ಟಿರುತ್ತೀರಿ; ಇದರ ಹೆಚ್ಚುಗಾರಿಕೆಯೇನು?

**ಉತ್ತರ:** ಇದರ ಹೆಚ್ಚುಗಾರಿಕೆಯೇನೆಂದರೆ: ನಮಗೆಲ್ಲರಿಗೂ ಒಬ್ಬನೇ ಆತ್ಮನೆಂದು ನಾವು ಹೇಳುವದನ್ನು ಯಾವನು ಬೇಕಾದರೂ **ಅನುಭವಕ್ಕೆ** ಹೊಂದಿಸಿ ಮನಗಾಣಬಹುದು. ಮಿಕ್ಕ ಆಧಾರಗಳು ಹಾಗಲ್ಲ; ವಿಶ್ವಾಸದಿಂದ ನಂಬಬೇಕಾದವುಗಳಾಗಿವೆ. ಇಷ್ಟೇ ಅಲ್ಲ, ಮತಗಳಲ್ಲಿ ಹೇಳಿರುವ ನಂಬಿಕೆಗಳಿಗೂ ಈ ಅಧ್ಯಾತ್ಮವಿಚಾರವೇ ಸರಿಯಾದ ಆಧಾರವನ್ನು ಒದಗಿಸುವದೆಂದು ಮೊದಲೇ ಹೇಳಿರುತ್ತೇನೆ.

**ಪ್ರಶ್ನೆ:** ತಾವು ಹೇಳುವದನ್ನು ಯಾರು ಬೇಕಾದರೂ ಮನಗಾಣಬಹುದೆ? ನನಗೆ ಇದು ಆಶ್ಚರ್ಯವೆನಿಸುತ್ತದೆ. ಹುಡುಗರಿಗೂ ಹೆಂಗಸರಿಗೂ ಇದನ್ನೆಲ್ಲ ತಿಳಿದುಕೊಳ್ಳುವದು ಸಾಧ್ಯವೆ? ಶಾಸ್ತ್ರವಿಚಾರಮಾಡಲಾರದವರಿಗೆ ಇದು ಮನಗಂಡೀತೆ? ನಮ್ಮ ದೇಶದವರಲ್ಲದವರೂ ಹಿಂದೂಮತದಲ್ಲಿ ನಂಬಿಕೆಯಿಲ್ಲದವರೂ ಈ ವಿಷಯವನ್ನು ಮನಸ್ಸಿಗೆ ಅಳವಡಿಸಿಕೊಳ್ಳಬಹುದೆ?

**ಉತ್ತರ:** ಯಾರಿಗೆ ವಿಚಾರಮಾಡುವ ಶಕ್ತಿಯಿರುವದೋ, ಯಾರು ಬರಿಯ ಕುತೂಹಲದಿಂದ ವಿಚಾರಮಾಡುವದಿಲ್ಲವೋ, ಯಾರು ತತ್ತ್ವವನ್ನು ತಿಳಿಯಬೇಕೆಂದು ಹಾತುವರೆಯುತ್ತಿರುವರೋ, ಯಾರು ಯುಕ್ತವಾದದ್ದನ್ನು ತೆಗೆದುಕೊಳ್ಳುವದಕ್ಕೂ ಅಯುಕ್ತವಾದದ್ದನ್ನು ಬಿಡುವದಕ್ಕೂ ಸಿದ್ಧರಾಗಿರುವರೋ, ಯಾರು ಮತ್ತೆ ಯಾವ ವಿಷಯದಲ್ಲಿಯೂ ಮನಸ್ಸನ್ನು ಹರಿಯಗೊಡದೆ ವಿಚಾರದ ವಿಷಯದಲ್ಲಿಯೇ ಅದನ್ನು ನಿಲ್ಲಿಸಿಕೊಳ್ಳುವ ಸಂಸ್ಕಾರವನ್ನು ಪಡೆದಿರುವರೋ, ಅವರೆಲ್ಲ ಇದನ್ನು ಮನಗಾಣಬಹುದು. ಈ

ಯೋಗ್ಯತೆಯೊಂದು ಇದ್ದರೆ ಹುಡುಗರು-ಹೆಂಗಸರೆಂಬ ಭೇದವನ್ನೇನೂ ಎಣಿಸುವದಕ್ಕೆ ಕಾರಣವಿಲ್ಲ. ಈಗ ನಾವು ಹೇಳುತ್ತಿರುವ ವಿಚಾರಕ್ಕೆ ಈ ದೇಶದವರೇ ಆಗಬೇಕೆಂಬುದಾಗಲಿ ಹಿಂದೂಮತವನ್ನು ನಂಬಿದವರೇ ಆಗ ಬೇಕೆಂಬುದಾಗಲಿ ಈಗಿನ ಕಾಲದವರೇ ಆಗಬೇಕೆಂಬುದಾಗಲಿ, ಅವಶ್ಯವಿಲ್ಲವೆಂದು ಮೊದಲ್ಲೇ ಹೇಳಿದೇನೆ.

**ಪ್ರಶ್ನೆ:** ಈ ವಿಚಾರವನ್ನು ಹೇಗೆ ಮಾಡಬೇಕು?

**ಉತ್ತರ:** ಈ ವಿಷಯವನ್ನು ಮತ್ತೊಮ್ಮೆ ಚರ್ಚೆಗೆ ತೆಗೆದುಕೊಳ್ಳೋಣ. ಅಧ್ಯಾತ್ಮವಿಚಾರವೆಂಬುದು ಅರ್ಥವಿಲ್ಲದ ಮಾತೆಂದಾಗಲಿ ಈ ವಿಚಾರದಿಂದ ಲೋಕಕ್ಕೆ ಏನೊಂದೂ ಪ್ರಯೋಜನವಿಲ್ಲವೆಂದಾಗಲಿ ಹೇಳುವದು ತಪ್ಪೆಂಬುದು ಇದುವರೆಗಿನ ನಮ್ಮ ಸಂಭಾಷಣೆಯಲ್ಲಿ ಸಿದ್ಧವಾಗಿರುತ್ತದೆ. ಅಧ್ಯಾತ್ಮವಿಚಾರದಿಂದ ಲೋಕವ್ಯವಹಾರದಲ್ಲಿ ಒಂದು ಬಗೆಯ ಹೊಸ ದೃಷ್ಟಿಯು ಉಂಟಾಗುವದೆಂದೂ ಇದರಿಂದ ಜನರಲ್ಲಿ ಒಬ್ಬರಿಗೊಬ್ಬರಿಗೆ ಮೈತ್ರಿಯುಂಟಾಗುವದೆಂದೂ ಸಂಕ್ಷೇಪವಾಗಿ ತಿಳಿಸಿರುತ್ತೇನೆ. ಈ ದೃಷ್ಟಿಯಿಂದ ಆರ್ಥಿಕ, ಸಾಮಾಜಿಕ, ರಾಜಕೀಯ-ಮುಂತಾದ ತೊಡಕಿನ ಪ್ರಶ್ನೆಗಳನ್ನು ಹೇಗೆ ಬಿಡಿಸಬಹುದೆಂಬ ವಿವರವನ್ನೂ ಮತ್ತೊಮ್ಮೆ ತಿಳಿಸುವೆನು. ಇದುವರೆಗಿನ ಸಂಭಾಷಣೆಯಿಂದ ಅಧ್ಯಾತ್ಮ ವಿಚಾರದಲ್ಲಿ ನಿಮಗೆ ಒಂದಿಷ್ಟಾದರೂ ಸವಿಯುಂಟಾಗಿದ್ದರೆ ನಾನು ಧನ್ಯನು.

~~~~ * * * ~~~~~
~~~~

# ಕೆಲವು ಪುಟ್ಟಪುಸ್ತಕಗಳು

## (ಹೊಸದಾಗಿ ವೇದಾಂತವಿಚಾರವನ್ನು ಆರಂಭಿಸುವವರಿಗೆ)

| | ಬೆಲೆ ರೂ. |
|---|---|
| **ಅಧ್ಯಾತ್ಮವೆಂದರೇನು?** (ಆಧ್ಯಾತ್ಮ ಎಂಬ ಮಾತಿನ ವಿವರಣೆ) | 3-00 |
| **ರಸನಿಮಿಷಗಳು** (ಆನಂದಜೀವನಕ್ಕೆ ಅವಶ್ಯಕವಾದ ಸೂಕ್ತಿಗಳು) | 2-00 |
| **ಶಂಕರಮಹಾಮನನ** (ವೇದಾಂತದರ್ಶನದ ಕಿರುಪರಿಚಯ) | 3-00 |
| **ಆತ್ಮಬೋಧ** (ಪುಟ್ಟ ಪ್ರಕರಣ, ಭಾವಾರ್ಥದೊಡನೆ) | 3-00 |
| **ಉಪನಿಷತ್ತುಗಳ ಮೊದಲನೆಯ ಪರಿಚಯ**(ಕಥಾಸಂದರ್ಭದೊಡನೆ) | 8-00 |
| **ವೇದಾಂತಬಾಲಬೋಧೆ** (ಪ್ರಾತಃಸ್ಮರಣಸ್ತೋತ್ರದ ವ್ಯಾಖ್ಯಾನ) | 6-00 |
| **ವೇದಾಂತಪ್ರವೇಶಿಕೆ** ('ಅದ್ವೈತಪಂಚರತ್ನ' ಸ್ತೋತ್ರದ ವ್ಯಾಖ್ಯಾನ) | 8-00 |
| **ಆತ್ಮಪ್ರತಿಬೋಧ** (ಕೇನೋಪನಿಷತ್ತನ್ನು ಕುರಿತು ಪ್ರಬಂಧ) | 5-00 |
| **ವೇದಾಂತಕಥಾವಳಿ** (ತತ್ತ್ವವಿಚಾರಸಹಿತವಾದ ೨೧ ಕಥೆಗಳು) | 6-00 |
| **ವಿಲಕ್ಷಣಮೌನಿ** (ಹತ್ತು ಉಪನಿಷತ್ತುಗಳ ತಾತ್ಪರ್ಯಸಂಗ್ರಹ) | 2-00 |
| **ಸಮುದ್ರಮಥನ** (ಪೌರಾಣಿಕಕಥೆ - ರಹಸ್ಯಾರ್ಥದೊಡನೆ) | 6-00 |
| **ಮೋಹಮುದ್ಗರ** (ಭಜಗೋವಿಂದಸ್ತೋತ್ರ - ಭಾವಾರ್ಥಸಹಿತ) | 2-00 |
| **ಮೂಲರಾಮಾಯಣ**(ವಾಲ್ಮೀಕಿರಾಮಾಯಣದ ಪ್ರಥಮಸರ್ಗ,ಸಾರ್ಥ) | 2-00 |
| **ಸರ್ವೇಷ್ಟಸಿದ್ಧಿ** (ಎಲ್ಲಾ ಕೋರಿಕೆಗಳೂ ನೆರವೇರುವ ಬಗೆ) | 6-00 |
| **ಭಗವದ್ಗೀತೆಯ ಸಾರ-ಪ್ರಧಾನೋಪದೇಶಗಳು** (ಕಿರುಪ್ರಬಂಧ) | 6-00 |
| **ಸದ್ಗುರುವಿನ ಅನುಗ್ರಹ** (ಒಂದು ಲೇಖನ) | 1-00 |
| **ಸ್ತುತಿ ಪುಷ್ಪಾಂಜಲಿ** (ಭಕ್ತರೆಲ್ಲರೂ ಕಂಠಪಾಠ ಮಾಡಲು ಯೋಗ್ಯವಾದ ಶ್ಲೋಕಗಳು, ಪ್ರತಿಪದಾರ್ಥಸಹಿತ) | 6-00 |
| **ಸದ್ಗುರು ಚರಿತಾಮೃತ** (ಶ್ರೀ ಶ್ರೀ ಸ್ವಾಮಿಗಳ ಜೀವನಚರಿತ್ರೆ) | 30-00 |
| **ಗೀತಾಮನನ** (೧೦೧ ಶ್ಲೋಕಗಳಲ್ಲಿ ಗೀತೆಯ ಸಂಗ್ರಹ-ವಿವರಣೆ) | 5-00 |
| **ಗೀತಾ-ಸಾರ್ಥ** (ಪಾರಾಯಣ-ಅನುಸಂಧಾನಕ್ಕೆ: ಟಿಪ್ಪಣಿಗಳೊಡನೆ) | 15-00 |

**ಪೂರ ಬೆಲೆಪಟ್ಟಿಗೆ ಕಾರ್ಯಾಲಯಕ್ಕೆ ಬರೆದುಕೊಳ್ಳಿ**

# ಅಧ್ಯಾತ್ಮಪ್ರಕಾಶಕಾರ್ಯಾಲಯ
# ಹೊಳೆನರಸೀಪುರ

## ಧ್ಯೇಯ ಮತ್ತು ಚಟುವಟಿಕೆಗಳು

**ಸ್ಥಾಪನೆ:** ಬ್ರಹ್ಮೀಭೂತ ಪರಮಹಂಸ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳವರು ತಮ್ಮ ಜೀವಿತಕಾಲದಲ್ಲಿ 1920ರಲ್ಲಿ ಈ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿದರು. ಅಧ್ಯಾತ್ಮವಿದ್ಯೆಯ ಸಾಧನಸಿದ್ಧಾಂತಗಳಲ್ಲಿ ಜನರಿಗೆ ಅಭಿರುಚಿಯನ್ನುಂಟುಮಾಡುವದರ ಮೂಲಕ ಭಾರತೀಯ ಸಂಸ್ಕೃತಿಯ ಪ್ರಚಾರಕ್ಕೆ ನೆರವಾಗುವದೇ ಈ ಸಂಸ್ಥೆಯ ಮುಖ್ಯೋದ್ದೇಶವು.

**ಗ್ರಂಥಪ್ರಕಟಣೆ:** ಸಂಸ್ಥೆಯಲ್ಲಿ ಈವರೆಗೆ ಕನ್ನಡ, ಸಂಸ್ಕೃತ, ಇಂಗ್ಲೀಷು-ಭಾಷೆಗಳಲ್ಲಿ ಬರೆದ ಸ್ವತಂತ್ರಗ್ರಂಥಗಳೂ ಭಾಷಾಂತರಿಸಿದ ಅಧ್ಯಾತ್ಮಗ್ರಂಥಗಳೂ ಸೇರಿ ಸುಮಾರು 200 ಗ್ರಂಥಗಳು ಪ್ರಕಟವಾಗಿವೆ. ಕೆಲವು ಗ್ರಂಥಗಳಿಗೆ ಉದಾರಾಶ್ರಯರಾದ ಶ್ರೀಮಂತರು ಸಹಾಯಮಾಡಿ ಆಶ್ರಯದಾತರೂ ಪೋಷಕರೂ ಆಗಿದ್ದಾರೆ. ಈಗಲೂ ಗ್ರಂಥಪ್ರಕಟಣೆ ನಿರಂತರವಾಗಿ ಸಾಗುತ್ತಿದೆ.

**ಅಧ್ಯಾತ್ಮಪ್ರಕಾಶ: ಮಾಸಪತ್ರಿಕೆ:-**

ಕಳೆದ 66 ವರ್ಷಗಳಿಂದ ನಡೆದುಕೊಂಡು ಬರುತ್ತಿರುವ ಈ ಪತ್ರಿಕೆಯು ಪ್ರತಿ ತಿಂಗಳ ಮೊದಲನೆಯ ವಾರದಲ್ಲಿ ಪ್ರಕಟವಾಗುತ್ತಿದೆ. ಇದು ಕಾರ್ಯಾಲಯದ ಚಟುವಟಿಕೆಗಳ ಪ್ರಚಾರದ ಅಂಗವಾಗಿದೆ. ಇದರಲ್ಲಿ ಉಪನಿಷದ್ವಾಕ್ಯಗಳ ಆಧಾರವುಳ್ಳ ಸಂದೇಶ, ಭಕ್ತಿ, ಜ್ಞಾನ, ವೈರಾಗ್ಯ ಪ್ರಧಾನವಾದ ಅಧ್ಯಾತ್ಮಲೇಖನಗಳು, ಸತ್ಯಕಾಮನ ಪತ್ರಗಳು, ನೀತಿವಾಕ್ಯಗಳು, ವೇದಮಂತ್ರಗಳ ಭಾಷ್ಯರೂಪವಾದ ಲೇಖನಗಳು, ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು ಶ್ರೀಶ್ರೀಗಳವರ ಬರಹಗಳು. ಕಾರ್ಯಾಲಯದ ಸುದ್ದಿ, ಜನರು ಮಾಡುವ ಸಹಾಯದ ಉಪಕಾರಸ್ಮರಣೆ ಮುಂತಾದ ಸರಳವಾದ ಶೈಲಿಯ ಲೇಖನಗಳು ಪ್ರಕಟವಾಗುತ್ತಿವೆ. ವೇದಾಂತವನ್ನು ಕೇವಲ ಶಾಸ್ತ್ರಾಧ್ಯಯನವಾಗಿ ಮಾಡದೆ

ನಿತ್ಯಜೀವನದಲ್ಲಿಯೂ ಅದರ ಸವಿಯನ್ನು ಕಾಣುವಂತೆ ಅನುಸಂಧಾನ ಮಾಡುವ ಬಗೆಯನ್ನೂ ವರ್ಣಿಸುವ ಲೇಖನಗಳಿಗೇ ಇಲ್ಲಿ ಪ್ರಾಶಸ್ತ್ಯವಿರುತ್ತದೆ. ವಾದಗ್ರಸ್ತ ವಿಷಯವಾಗಲಿ, ರಾಗದ್ವೇಷಾಸ್ಪದವಾದ ಬರಹಗಳಾಗಲಿ ಇರುವದಿಲ್ಲ. ಒಮ್ಮೆ ಚಂದಾದಾರರಾಗಿ ನೋಡಿರಿ.

ಪತ್ರಿಕೆಗೆ ವಾರ್ಷಿಕ ಚಂದಾ ರೂ. 30; ಮಹಾಪೋಷಕರಿಗೆ ರೂ. 251. ಈಗ 2000 ಜನರು ಮಹಾಪೋಷಕರಾಗಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ.

**ದೈನಂದಿನಚಟುವಟಿಕೆಗಳು:**

ಸಂಸ್ಥೆಯಲ್ಲಿ ಪ್ರತಿದಿನವೂ ಶ್ರೀದಿಗ್ವಿಜಯರಾಮರ ಪೂಜೆ, ಗುರುಪಾದುಕಾ ಪೂಜೆ, ವೇದಾಂತಭಾಷ್ಯಪಾಠ. ಇವುಗಳನ್ನು ನಡೆಯಿಸುತ್ತಿದೆ. ಪ್ರತಿವರ್ಷವೂ ಆಯಾ ಕಾಲದಲ್ಲಿ ಶ್ರೀರಾಮನವರಾತ್ರಿ- ಶಂಕರಜಯಂತಿ, ಶ್ರೀ ಶ್ರೀಗಳವರ ಆರಾಧನೆ, ಶರನ್ನವರಾತ್ರಿ, ಗೀತಾಜಯಂತಿ, ವೇದಾಂತಸಪ್ತಾಹ ಮತ್ತು ವೇದಾಂತಶಿಬಿರಗಳನ್ನು ಏರ್ಪಡಿಸುತ್ತಿದೆ. ಇದರಲ್ಲಿ ಜಾತಿ, ಮತ, ವರ್ಣ, ಲಿಂಗ, ಆಶ್ರಮ ಬೇಧವಿಲ್ಲದೆ ಎಲ್ಲಾ ಸಾರ್ವಜನಿಕರೂ ಭಾಗವಹಿಸುತ್ತಿದ್ದಾರೆ. ಕೆಲವು ಸಂದರ್ಭಗಳಲ್ಲಿ ಸಾರ್ವಜನಿಕವಾಗಿ ಅನ್ನದಾನವೂ ನಡೆಯುತ್ತಿದೆ.

**ಉಚಿತವಾಚನಾಲಯ**

ಸಾರ್ವಜನಿಕರ ಉಪಯೋಗಕ್ಕಾಗಿ ಒಂದು ಉಚಿತ ವಾಚನಾಲಯವೂ ಒಂದು ಅಧ್ಯಾತ್ಮ ಪುಸ್ತಕಭಂಡಾರವೂ ಇದೆ. ಇದರ ಉಪಯೋಗವನ್ನು ಎಲ್ಲರೂ ಪಡೆದುಕೊಳ್ಳಬಹುದು.

**ಸ್ವಂತಕಟ್ಟಡಗಳು:**

ಕಾರ್ಯಾಲಯಕ್ಕೆ ಹೊಳೆನರಸೀಪುರ, ಮೈಸೂರು ಹಾಗೂ ಬೆಂಗಳೂರುಗಳಲ್ಲಿ ಸ್ವಂತವಾದ ಕಟ್ಟಡಗಳಿವೆ. ಹೊಳೆನರಸೀಪುರದ ಕಾರ್ಯಾಲಯಕ್ಕೆ ಬರಬಹುದಾದ ಪರಸ್ಥಳದ ಅತಿಥಿಗಳ ಸೌಕರ್ಯಕ್ಕಾಗಿ ಈಚೆಗೆ ಭಕ್ತಾದಿಗಳಿಂದ ಉದಾರದಾನವಾಗಿ ಪಡೆದ 8.5 ಲಕ್ಷ ರೂ.ಗಳ

ವೆಚ್ಚದಲ್ಲಿ ಒಂದು ಅತಿಥಿಗೃಹವನ್ನೂ ಮೊದಲನೆಯ ಮಹಡಿಯಲ್ಲಿ ನಾಲ್ಕು ಸುಸಜ್ಜಿತಕೊಠಡಿಗಳನ್ನೂ ನಿರ್ಮಿಸಲಾಗಿದೆ.

**ಶಾಖಾಕಾರ್ಯಾಲಯಗಳು:**

**(i) ಅಧ್ಯಾತ್ಮಪ್ರಕಾಶಕಾರ್ಯಾಲಯ, ತ್ಯಾಗರಾಜನಗರ (ಸುಬ್ಬರಾಮಶೆಟ್ಟಿ ಲೇಔಟ್). ಬೆಂಗಳೂರು-28. ದೂರವಾಣಿ: 625548.**

ಪ್ರತಿದಿನವೂ ಬೆಳಿಗ್ಗೆ ವೇ।। ಬ್ರ।। ಶ್ರೀ।। ಕೆ.ಜಿ. ಸುಬ್ರಾಯಶರ್ಮರಿಂದ ಅಧ್ಯಾತ್ಮಮಂದಿರ, ವಿಶ್ವೇಶ್ವರಪುರ ಮತ್ತು ಕಾರ್ಯಾಲಯದಲ್ಲಿ ಶಾಂಕರ ಭಾಷ್ಯಪ್ರವಚನಗಳು ಮತ್ತು ಸಂಜೆಯಲ್ಲಿ ಶ್ರೀ ರಾಮಕೃಷ್ಣಾಶ್ರಮ, ಶಂಕರಜಯಂತಿ ಮಂಡಳಿ- ಜಯನಗರ, ರಮಣಾಶ್ರಮ ಮತ್ತು ಕಾರ್ಯಾಲಯದಲ್ಲಿ ನಿಯತದಿನಗಳಲ್ಲಿ ವೇದಾಂತ ಪ್ರವಚನಗಳು ನಡೆಯುತ್ತಿವೆ. "ಶಂಕರ ಭಾಸ್ಕರ" **ತ್ರೈಮಾಸಿಕ ಪತ್ರಿಕೆಯೂ ಪ್ರಕಟವಾಗುತ್ತಿದೆ. ಆಜೀವ ಸದಸ್ಯತ್ವದ ಚಂದಾ: ರೂ.251.**

**(ii) ಅಧ್ಯಾತ್ಮಪ್ರಕಾಶಕಾರ್ಯಾಲಯ, ಸಂಯಮೀಂದ್ರಭವನ, ಮತ್ತೂರು, ಶಿವಮೊಗ್ಗ-577203:-**

ಒಂದು ಅಧ್ಯಾತ್ಮವಿದ್ಯಾನಿಲಯವನ್ನು ಉಚಿತವಾಗಿ ನಡೆಸುತ್ತಿದೆ. ವಿದ್ಯಾರ್ಥಿಗಳಿಗೆ ವೇದ, ಪ್ರಯೋಗ, ಸಂಸ್ಕೃತ ಭಾಷಾಪಾಠಗಳು, ವ್ಯಾಕರಣ, ಶಾಂಕರಭಾಷ್ಯಪಾಠಗಳನ್ನು ಹೇಳಿಕೊಡಲಾಗುತ್ತಿದೆ. ಪ್ರವೇಶ ಉಚಿತ, ಆರು ವರ್ಷಗಳ ವಿದ್ಯಾಭ್ಯಾಸ.

**(iii) ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಚಂದ್ರಮೌಳೀಶ್ವರ ದೇವಾಲಯದ ಆವರಣ, ಜಯಲಕ್ಷ್ಮೀಪುರಮ್, ಮೈಸೂರು – 577012**

ಪ್ರತಿ ಬುಧವಾರ ಬೆಳಿಗ್ಗೆ 10 ಗಂಟೆಯಿಂದ 11 ಗಂಟೆಯವರೆಗೆ ಸ್ವಾಮಿಗಳ ಶಿಷ್ಯರಾದ ಪೂಜ್ಯ ಶ್ರೀ।। ಶ್ರೀ।। ಆತ್ಮಾನಂದೇಂದ್ರ ಸರಸ್ವತೀ ಸ್ವಾಮಿಗಳಿಂದ "ನೈಷ್ಕರ್ಮ್ಯಸಿದ್ಧಿ" ಗ್ರಂಥದ ಪ್ರವಚನಗಳು ನಡೆಯುತ್ತಿವೆ.

**(iv) ಅಧ್ಯಾತ್ಮಪ್ರಚಾರ ಸೇವಾಶ್ರಮ, ಶಾಂತಿನಗರ ರಾಯದುರ್ಗ - 515865 (ಆಂಧ್ರಪ್ರದೇಶ)**

ಶಾಖಾಕಾರ್ಯಾಲಯದ ಅಧ್ಯಕ್ಷರಾದ ಪಿ. ಲಕ್ಷ್ಮೀಕಾಂತಶರ್ಮಾರವರಿಂದ ತೆಲುಗುಭಾಷೆಯಲ್ಲಿ ವೇದಾಂತಪ್ರವಚನಗಳು ನಡೆಯುತ್ತಿವೆ.

ಆಯಾ ಶಾಖಾಕಾರ್ಯಾಲಯಗಳನ್ನು ನೇರಾಗಿ ಸಂಪರ್ಕಿಸಿ ಹೆಚ್ಚಿನ ವಿವರಗಳನ್ನು ಪಡೆದುಕೊಳ್ಳಿರಿ.

ನಮ್ಮ ಕಾರ್ಯಾಲಯದ ಪುಸ್ತಕಗಳು ಎಲ್ಲಾ ಶಾಖಾ ಕಾರ್ಯಾಲಯ ಗಳಲ್ಲಿಯೂ ದೊರಕುತ್ತವೆ.

**ಆಡಳಿತ:** ಸಂಸ್ಥೆಯು ಒಂದು ಕಾರ್ಯಕಾರಿಸಮಿತಿ ಆಡಳಿತದಲ್ಲಿದ್ದು ಪಬ್ಲಿಕ್ ಛಾರಿಟಬಲ್ ಟ್ರಸ್ಟ್‌ಆಗಿ ರಿಜಿಸ್ಟರಾಗಿದೆ. ಪ್ರತಿವರ್ಷವೂ ಲೆಕ್ಕಗಳನ್ನು ಆಡಿಟ್ ಮಾಡಿಸಲಾಗುತ್ತಿದೆ. ಸಂಸ್ಥೆಗೆ ಕರ್ನಾಟಕ ವರಮಾನ ತೆರಿಗೆ ಕಮೀಷನ್‌ರವರ ನಂ. 718/84-91 ತಾ. 4.11.95 ರ ಪತ್ರದಂತೆ 80 G. ವರ್ಗದ ವರಮಾನತೆರಿಗೆ ರಿಯಾಯಿತಿ 31.3.98 ರವರೆಗೆ ದೊರೆತಿದೆ. ಕಾರ್ಯಾಲಯಕ್ಕೆ ಸಹಾಯ ಮಾಡುವ ದಾನಿಗಳು ಇದರ ಉಪಯೋಗವನ್ನು ಪಡೆದುಕೊಳ್ಳಬಹುದು.

ಬಿನ್ನಹ: **ತಾವುಗಳು ಒಮ್ಮೆ ಸಂಸ್ಥೆಯ ಪರಿಚಯ ಮಾಡಿಕೊಂಡು ಸಂಪರ್ಕವನ್ನು ಇಟ್ಟುಕೊಳ್ಳಿರಿ. ಮಾಸಪತ್ರಿಕೆಗೆ ಚಂದಾದಾರರಾಗಿ ನಿಮ್ಮ ಬಂಧುಮಿತ್ರರಲ್ಲಿಯೂ ಪ್ರಚಾರ ಮಾಡಿರಿ. ಅಧ್ಯಾತ್ಮ ಗ್ರಂಥಗಳನ್ನು ಕೊಂಡು ಓದಿ ಪ್ರೋತ್ಸಾಹಿಸಿರಿ. ಗ್ರಂಥಗಳ ಮುದ್ರಣಕ್ಕೆ ಧನಸಹಾಯ ನೀಡಿರಿ. ಅಧ್ಯಾತ್ಮ ಗ್ರಂಥಗಳನ್ನು ಒಟ್ಟಾಗಿ ಕೊಂಡು ಸಂಘಸಂಸ್ಥೆಗಳಿಗೆ ದಾನಮಾಡಿರಿ. ಅಧ್ಯಾತ್ಮವಿದ್ಯಾಪ್ರಚಾರಕ್ಕೆ ಯಾವದೇ ರೀತಿಯ ನೆರವನ್ನಾದರೂ ನೀಡುವ ಮೂಲಕ ನಮ್ಮ ಚಟುವಟಿಕೆಗಳನ್ನು ಪ್ರೋತ್ಸಾಹಿಸಿ ಪುಣ್ಯಭಾಗಿಗಳಾಗಿ ಬಾಳಿರಿ.**

# ಸಂಸ್ಥಾಪಕರ ಸ್ಮರಣೆ

ಈ ಕಾರ್ಯಾಲಯವು ಉಪನಿಷತ್ತುಗಳಲ್ಲಿ ಅಡಗಿರುವ ವೇದಾಂತ ಸಿದ್ಧಾಂತಗಳ ಪ್ರಚಾರಕ್ಕಾಗಿ ಶ್ರೀಶ್ರೀಗಳವರಿಂದ ಸ್ಥಾಪಿಸಲ್ಪಟ್ಟಿದೆ. ಪೂಜ್ಯ .ಶ್ರೀಶ್ರೀಗಳವರ ಪೂರ್ವಾಶ್ರಮದ ಹೆಸರು ವೈ. ಸುಬ್ಬರಾವ್ - ಎಂದಿತ್ತು. ಅವರು 1880 ರಿಂದ 1948 ರವರೆಗೆ (68ನೆಯ ವಯಸ್ಸಿನವರೆಗೆ) "ಸುಬ್ರಾಯ" ರಾಗಿದ್ದರು. 10.6.1948 ರಿಂದ ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳಾದರು. ತಮ್ಮ ಬಾಲ್ಯದಿಂದ 96ನೆಯ ವಯಸ್ಸಿನವರೆಗೂ ಬೆಳಗ್ಗೆ ಎದ್ದಾಗಿನಿಂದ ಮಲಗುವವರೆಗೂ ವೇದಾಂತಗ್ರಂಥಪಠನ, ಚಿಂತನ, ಪ್ರವಚನ, ಲೇಖನಗಳಲ್ಲಿ ತತ್ಪರರಾಗಿದ್ದು "ಪುರುಷಸರಸ್ವತಿ" ಎಂಬ ಅನ್ವರ್ಥನಾಮವನ್ನು ಹೊಂದಿದ್ದರು. ಕರ್ನಾಟಕದ "ಅಭಿನವಶಂಕರಾಚಾರ್ಯ"ರಾಗಿ ಬಾಳಿ 1975ನೇ ಆಗಸ್ಟ್ 5 (1880-1975) ರಂದು ಬ್ರಹ್ಮೀಭೂತರಾದರು. ಇವರ ಮಹಾಸಮಾಧಿಪೀಠವು ಹೊಳೆನರಸೀಪುರದಲ್ಲಿದೆ. ಸಮಾಧಿಯ ಮೇಲೆ ಶಿಲಾ ಪಾದುಕೆಗಳನ್ನು 20-2-97ರಂದು ಪ್ರತಿಷ್ಠೆ ಮಾಡಿ ನಿತ್ಯವೂ ಪೂಜಾದಿಗಳನ್ನು ನಡೆಸುತ್ತಿದೆ.

**5-1-97** ರಂದು **"ಸದ್ಗುರುಚರಿತಾಮೃತ"** (ಶ್ರೀ ಶ್ರೀಗಳವರ ಜೀವನಚರಿತ್ರೆ) ಎಂಬ **ಪುಸ್ತಕವನ್ನು ಪ್ರಕಾಶನಗೊಳಿಸಿದೆ. ಬೆಲೆ. ರೂ.30. ತರಿಸಿಕೊಂಡು ಓದಿರಿ**

**ಬ್ರಹ್ಮನಿಷ್ಠಾಯ ವಿದ್ಮಹೇ ಸಂಯಮೀಂದ್ರಾಯ ಧೀಮಹಿ।**
**ತನ್ನಃ ಸಚ್ಚಿದಾನಂದಃ ಪ್ರಚೋದಯಾತ್॥**

**"ಓಂ ನಮೋ ಭಗವತೇ ಸಚ್ಚಿದಾನಂದಾಯ"**

# ಓದುಗರಿಗೆ

1. ಕನ್ನಡಗ್ರಂಥಗಳನ್ನು ವಿಷಯಾನುಗುಣವಾಗಿ ಹನ್ನೆರಡು ವಿಭಾಗಗಳಾಗಿ ವಿಂಗಡಿಸಿದೆ. ವಾಚಕರು ತಮ್ಮ ಅರ್ಹತೆ ಹಾಗೂ ಅಭಿರುಚಿಗೆ ತಕ್ಕಂತೆ ಆಯಾ ವಿಭಾಗಗಳಿಂದ ಗ್ರಂಥಗಳನ್ನು ಆರಿಸಿಕೊಳ್ಳಬೇಕಾಗಿ ಕೋರಿದೆ. ಹೀಗೆ ಓದುವದರಿಂದ ಅಧ್ಯಾತ್ಮವಿದ್ಯೆಯು ಕೈವಶವಾಗುತ್ತದೆ. ಓದಿದಮೇಲೂ ಉಳಿಯಬಹುದಾದ ಸಂಶಯಗಳಿಗೆ ಕಾರ್ಯಾಲಯಕ್ಕೆ ಬರೆದುಕೊಂಡಲ್ಲಿ ಉತ್ತರವನ್ನು ಕೊಡಲಾಗುವದು.

2. ಅಧ್ಯಾತ್ಮಗ್ರಂಥಗಳ ವಾಚಕರೆಲ್ಲರೂ "ಅಧ್ಯಾತ್ಮಪ್ರಕಾಶ" ಮಾಸಪತ್ರಿಕೆಗೂ ಚಂದಾದಾರರಾಗುವದು ಒಳ್ಳೆಯದು. ಏಕೆಂದರೆ ಅನೇಕ ವಿಷಯಗಳಿಗೆ ಪತ್ರಿಕೆಯಲ್ಲಿ ವಿವರಣೆಯು ಸಿಗುವದು. ಪತ್ರಿಕೆಯು ಇಂಥ ಓದುಗರಿಗೇ ಮೀಸಲಾಗಿದೆ. ವಾರ್ಷಿಕ ಚಂದಾ: ರೂ. 30; ಮಹಾಪೋಷಕರ ಚಂದಾ, ರೂ. 251.

3. ಬೆಂಗಳೂರು ಕಾರ್ಯಾಲಯದಿಂದ ಪ್ರಕಟವಾಗುತ್ತಿರುವ "ಶಂಕರಭಾಸ್ಕರ" ತ್ರೈಮಾಸಿಕ ಪತ್ರಿಕೆಯನ್ನೂ ತರಿಸಿ ಓದಿರಿ. ಇದರ ಆಜೀವ ಸದಸ್ಯತ್ವ: ರೂ. 251.

4. ಆಂಧ್ರಪ್ರದೇಶದ ರಾಯದುರ್ಗದಿಂದ "ಅಧ್ಯಾತ್ಮಜ್ಯೋತಿ" ಎಂಬ ತೆಲುಗು ತ್ರೈಮಾಸಿಕ ಪತ್ರಿಕೆ ಪ್ರಕಟವಾಗುತ್ತಿದೆ. ವಾರ್ಷಿಕ ಚಂದಾ: ರೂ. 30; ಆಜೀವ ಸದಸ್ಯತ್ವ: ರೂ. 300. ವಿಳಾಸ: ಸಂಪಾದಕರು, ಅಧ್ಯಾತ್ಮಜ್ಯೋತಿ, ಅಧ್ಯಾತ್ಮಪ್ರಚಾರಸೇವಾಶ್ರಮ, ರಾಯದುರ್ಗ 515 865, A.P.

**ಹೆಚ್ಚಿನವಿಷಯಗಳಿಗೆ ಕಾರ್ಯಾಲಯಕ್ಕೆ ಬರೆದುಕೊಳ್ಳಿರಿ.**

# ನಮ್ಮ ಗ್ರಂಥಗಳು ದೊರೆಯುವ ಸ್ಥಳಗಳು

1. **ಅಧ್ಯಾತ್ಮಪ್ರಕಾಶಕಾರ್ಯಾಲಯ,**
ತ್ಯಾಗರಾಜನಗರ, ಬೆಂಗಳೂರು- 560 028, ದೂ: 625548.

2. **ವೇದಾಂತ ಬುಕ್‌ಹೌಸ್,**
ಉಮಾ ಚಿತ್ರಮಂದಿರದ ಹತ್ತಿರ, ಚಾಮರಾಜಪೇಟೆ, ಬೆಂಗಳೂರು-560 018.
ದೂರವಾಣಿ: 60 7590

3. **ನ್ಯೂ ವೇದಾಂತ ಬುಕ್‌ಹೌಸ್,**
ಆರ್.ಕೆ.ಪ್ಲಾಜಾ, 8ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - 3

4. **ಟಿ. ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್**
ಪುಸ್ತಕ ವ್ಯಾಪಾರಿಗಳು, ಚಿಕ್ಕಪೇಟೆ, ಬೆಂಗಳೂರು - 560 053.

5. **ಗೀತಾ ಏಜನ್ಸೀಸ್,**
ಬುಕ್ ಸೆಲರ್ಸ್, ಬಳೇಪೇಟೆ ಚೌಕ, ಬೆಂಗಳೂರು - 560 053.

6. **ಗೀತಾ ಬುಕ್ ಹೌಸ್,**
ನ್ಯೂ ಸ್ಟ್ಯಾಚು ಸ್ಕೇರ್, ಮೈಸೂರು - 570 001

7. **ಮೆಸರ್ಸ್ ಸಮಾಜ ಪುಸ್ತಕಾಲಯ,**
ಶಿವಾಜಿ ಬೀದಿ, ಧಾರವಾಡ - 580 001

8. **ಶ್ರೀವಿದ್ಯಾಭಾರತಿ ಬುಕ್ಸ್ ಸೆಂಟರ್**, ಭಾರತಿ ಬೀದಿ, ಶೃಂಗೇರಿ.

9. **ಸಪ್ನಾ ಬುಕ್ ಸ್ಟಾಲ್,**
ತ್ರಿಭುವನ್ ಚಿತ್ರಮಂದಿರದ ಎದುರು, ಗಾಂಧಿನಗರ, ಬೆಂಗಳೂರು-560 009.

**ದಯವಿಟ್ಟು ಗಮನಿಸಿ:**

1. ಚಂದಾದಾರರ ರಿಯಾಯತಿಯನ್ನು ಬಯಸುವವರು ನೇರಾಗಿ ಕಾರ್ಯಾಲಯಕ್ಕೆ ಬರೆದುಕೊಳ್ಳಬೇಕು.
2. ಎಲ್ಲಾ ಗ್ರಂಥಗಳಿಗೂ ಅಂಚೆವೆಚ್ಚ, ಪ್ಯಾಕಿಂಗ್ ಪ್ರತ್ಯೇಕ.
3. V.P. ಮೂಲಕ ಪುಸ್ತಕ ತರಿಸಿಕೊಳ್ಳುವವರು 25% ಮುಂಗಡ ಹಣವನ್ನು M.O. ಅಥವಾ D.D. ಮೂಲಕ (ಮಾತ್ರ) ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸುವುದಿಲ್ಲ.

# ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

## ಹೊಳೆನರಸೀಪುರ 573211

## ಈ ಕಾರ್ಯಾಲಯದಿಂದ ತಾವು ಯಾವಯಾವ ಲಾಭವನ್ನು ಪಡೆಯಬಹುದು?

೧. ಕಾರ್ಯಾಲಯದಲ್ಲಿ ನಡೆಯುತ್ತಿರುವ ಪೂಜೆ, ಭಜನೆ, ಪುರಾಣಶ್ರವಣ, ಉಪನ್ಯಾಸಗಳು, ಅನುಷ್ಠಾನಗಳು - ವೇದಾಂತಸಪ್ತಾಹ, ವೇದಾಂತಶಿಬಿರ ಇವುಗಳಲ್ಲಿ ಯಥಾಶಕ್ತಿಯಾಗಿ ಭಾಗವಹಿಸಬಹುದು.

೨. ಇಲ್ಲಿ ಪ್ರಕಟವಾಗುತ್ತಿರುವ ಅಮೂಲ್ಯ ಗ್ರಂಥಗಳನ್ನು ಕೊಂಡು ಓದಿ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳಬಹುದು.

೩. ಕಾರ್ಯಾಲಯದಲ್ಲಿ ಪ್ರಕಟವಾಗುವ "ಅಧ್ಯಾತ್ಮಪ್ರಕಾಶ" ಮಾಸಪತ್ರಿಕೆಗೆ ಚಂದಾದಾರರಾಗಿ ತಿಂಗಳುತಿಂಗಳೂ ಬಗೆಬಗೆಯ ಅಧ್ಯಾತ್ಮಬೋಧೆಯನ್ನು ಪಡೆಯಬಹುದು.

೪. ಕಾರ್ಯಾಲಯದಲ್ಲಿ ಬರೆದು ಸಿದ್ಧವಾಗಿರುವ ಪುಸ್ತಕಗಳ ಪ್ರಕಟನೆಗೆ ಯಥಾಶಕ್ತಿಯಾಗಿ ಧನಸಹಾಯವನ್ನು ಮಾಡಿ ಮಹಾಶ್ರಯದಾತರು, ಆಶ್ರಯದಾತರು, ಅಥವ ಮಹಾಪೋಷಕರು -ಎನಿಸಿ ಪುಣ್ಯವನ್ನೂ, ಕೀರ್ತಿಯನ್ನೂ ಸಂಪಾದಿಸಿಕೊಳ್ಳಬಹು ಈ ಪ್ರಕಟನೆಗಳ ಪುಸ್ತಕ ಭಂಡಾರವನ್ನು ಏರ್ಪಡಿಸಿಕೊಳ್ಳಬಹುದು.

೫. ಕಾರ್ಯಾಲಯದಲ್ಲಿರುವ ವಿದ್ಯಾಲಯಕ್ಕೆ ಯೋಗ್ಯರಾದ ವಿದ್ಯಾರ್ಥಿಗಳನ್ನು ಕಳುಹಿಸಿ ಅಧ್ಯಾತ್ಮವಿದ್ಯೆಯಲ್ಲಿ ಪ್ರವೀಣರನ್ನಾಗಿ ಮಾಡಿಸಿ ಅವರಿಂದ ನಿಮ್ಮ ಪ್ರಾಂತ್ಯದಲ್ಲಿ ಬ್ರಹ್ಮವಿದ್ಯಾಪ್ರಚಾರವನ್ನು ಮಾಡಿಸಬಹುದು.

೬. ಕಾರ್ಯಾಲಯದ ಕಟ್ಟಡಕ್ಕೂ, ವಿದ್ಯಾನಿಲಯ, ಪೂಜಾಮಂದಿರ, ಗುರುಮಂದಿರ, ಪುಸ್ತಕಭಂಡಾರ -ಇವಕ್ಕೂ ಯಥೋಚಿತವಾಗಿ ಸಹಾಯವನ್ನು ಮಾಡಿ ಪುಣ್ಯವನ್ನು ಗಳಿಸಿಕೊಳ್ಳಬಹುದು.

ಹೆಚ್ಚಿಗೆ ವಿಷಯಕ್ಕೆ ಕಾರ್ಯದರ್ಶಿಗಳಿಗೆ ಬರೆಯಿರಿ.